# ವಚನಸಾಹಿತ್ಯ ಸಂಪಾದನೆ ಮತ್ತು ಎಸ್.ಶಿವಣ್ಣ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಎಂ.ಮುಧೋಬನಾಯಕ

ಮಾರ್ಗದರ್ಶಕರು
ಡಾ. ಎಸ್.ಆರ್.ಚನ್ನವೀರಪ್ಪ
ಪ್ರವಾಚಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೪



# ವಚನಸಾಹಿತ್ಯ ಸಂಪಾದನೆ ಮತ್ತು ಎಸ್.ಶಿವಣ್ಣ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು
ಎಂ.ಮಧೋಬನಾಯಕ

ಮಾರ್ಗದರ್ಶಕರು
ಡಾ. ಎಸ್.ಆರ್.ಚನ್ನವೀರಪ್ಪ
ಪ್ರವಾಚಕರು





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೯

# ಸಂಶೋಧಕರ ಪ್ರಮಾಣ ಪತ್ರ

ವಚನ ಸಾಹಿತ್ಯ ಸಂಪಾದನೆ ಮತ್ತು ಎಸ್.ಶಿವಣ್ಣ ಎಂಬ ಸಂಪ್ರಬಂಧವನ್ನು ಡಾ.ಎಸ್.ಆರ್. ಚನ್ನವೀರಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎಂ.ಮುಧೋಬನಾಯಕ
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 12.10.2008

# ಮಾರ್ಗದರ್ಶಕರ ದೃಢೀಕರಣ ಪತ್ರ

ವಚನ ಸಾಹಿತ್ಯ ಸಂಪಾದನೆ ಮತ್ತು ಎಸ್.ಶಿವಣ್ಣ ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಎಂ.ಮುಧೋಬನಾಯಕ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ಎಸ್.ಆರ್.ಚನ್ನವೀರಪ್ಪ
ಮಾರ್ಗದರ್ಶಕರು ಮತ್ತು ಪ್ರವಾಚಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೨.೧೦.೨೦೦೯

## ಪರಿವಿಡಿ

೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಸಂಶೋಧನೆ ಎನ್ನುವುದು ಹೊಸಮಾರ್ಗಗಳನ್ನು ತೆರೆಯುವ ಒಂದು ಪ್ರಯತ್ನ. ವಿಜ್ಞಾನ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡುವವರು ಪ್ರಕೃತಿಯೊಡನೆ ಸೆಣಸುತ್ತಾರೆ. ಪ್ರಾಚೀನ ಇತಿಹಾಸವನ್ನು ತಿಳಿಯ ಬಯಸುವವರು ಕಾಲನೊಡನೆ ಸೆಣಸುತ್ತಾರೆ. ಪ್ರಾಚೀನ ಸಾಹಿತ್ಯವನ್ನು ಆರಿಸಿಕೊಂಡವರು ಸಾಹಿತಿಗಳ ಮತ್ತು ಕೃತಿಗಳ ಅಧ್ಯಯನ ಮಾಡುವುದರಲ್ಲಿ ಮಾತ್ರವಲ್ಲ ಸಾಹಿತ್ಯದ ಅಧ್ಯಯನದಲ್ಲಿಯೂ ಹೊಸ ಮಾರ್ಗಗಳನ್ನು ತಿಳಿಯುತ್ತಾರೆ. ಆದರೆ "ಸಂಶೋಧನೆ" ಯಾವ ಬಗೆಯದಾಗಿರಲಿ, ಅದನ್ನು ನಡೆಸುವ ಮನೋಧರ್ಮ ಒಂದೇ. ಮುಂದಿರುವ ಸಾಕ್ಷ್ಯಕ್ಕೆ ಬದ್ಧನಾಗಿ ಸತ್ಯದ ಅನ್ವೇಷಣೆ ನಡೆಯುತ್ತದೆ.

ಕನ್ನಡ ಸಂಶೋಧನೆಗೆ ಸುಮಾರು ನೂರೈವತ್ತು ವರ್ಷಗಳಿಗೂ ಹಿಂದಿನ ಇತಿಹಾಸವಿದೆ. ಜರ್ಮನ್ ಪ್ರಾದಿಗಳೂ ಈ ದೇಶಕ್ಕೆ ಬಂದು ಕನ್ನಡ ಭಾಷೆ, ಸಂಸ್ಕೃತಿ ಕುರಿತು, ಶೋಧಿಸಲು ಹೊರಟಂದಿನಿಂದ ಈ ಇತಿಹಾಸ ಪ್ರಾರಂಭವಾಗುತ್ತದೆ. ಸಂಶೋಧನೆ ಎಂಬುದು ಆಂಗ್ಲ ವಿದ್ವಾಂಸರು ನಮಗೆ ತೋರಿಸಿಕೊಟ್ಟ ಹೊಸ ಶೈಕ್ಷಣಿಕ ಶಿಸ್ತು.

ಹಸ್ತಪ್ರತಿಶಾಸ್ತ್ರದ ಒಂದು ಭಾಗವಾಗಿರುವ ಗ್ರಂಥಸಂಪಾದನಶಾಸ್ತ್ರ ಪ್ರಾರಂಭವಾದದ್ದು ೧೯ನೇ ಶತಮಾನದ ಮಧ್ಯಭಾಗದಿಂದ "ಪರಂಪರಾಗತವಾಗಿ ಬಂದ ಹಸ್ತಪ್ರತಿಗಳನ್ನು ಆಧರಿಸಿ ಮೂಲ ಪ್ರತಿಗೆ ಸಮೀಪವಾದ ಶುದ್ಧಪಾಠಗಳನ್ನು ಕಂಡುಕೊಳ್ಳುವ ಪ್ರಕ್ರಿಯಯೇ ಗ್ರಂಥಸಂಪಾದನೆ" ಪಾಶ್ಚಿಮಾತ್ಯ ವಿದ್ವಾಂಸರೇ ಕನ್ನಡ ಗ್ರಂಥಸಂಪಾದನೆಯ ಚಟುವಟಿಕೆಗಳಿಗೆ ಆದ್ಯ ಪ್ರವರ್ತಕರು.

ವ್ಯಾಕರಣ, ಛಂದಸ್ಸು, ಅಲಂಕಾರ, ಭಾಷಾಚರಿತ್ರೆ, ನಿಘಂಟು, ಸಾಹಿತ್ಯ ವಿಮರ್ಶೆ ಈ ಕ್ಷೇತ್ರದಲ್ಲಿ ಸಂಶೋಧನೆ ಮಾಡುವವರಿಗೆ ಕವಿ ಕೃತಿಯ ಶುದ್ಧಪಾಠದ ಅವಶ್ಯಕತೆ ಇರುತ್ತದೆ. ಪ್ರಾಚೀನ ಸಾಹಿತ್ಯ ಬಹುಮಟ್ಟಿಗೆ ತಾಳೆಗರಿ ಹಸ್ತಪ್ರತಿಗಳಲ್ಲಿ ಉಳಿದುಕೊಂಡು ಬಂದಿದೆ. ಈ ಕೃತಿಗಳಲ್ಲಿ ಅನೇಕ ಕಾರಣ ಗಳಿಂದಾಗಿ ಮೂಲಪ್ರತಿಯ ಪಾಠವು ಕೆಟ್ಟು ಹೋಗಿದ್ದರೆ, ಅದನ್ನು ಪರಿಶೋಧಿಸಿ, ಪಾಠಕ್ಲೇಷಗಳನ್ನು ಬಗೆಹರಿಸಿ ಮೂಲ ಕೃತಿಗೆ ಸನಿಹವಿರುವ ಶುದ್ಧಪಾಠ ಒದಗಿಸುವುದು ಗ್ರಂಥಸಂಪಾದಕನ ಕಾರ್ಯ. ಆಧುನಿಕ ಕಾಲದ ವಿದ್ವಾಂಸರು ಗ್ರಂಥಸಂಪಾದನೆ ಹಾಗೂ ಹಸ್ತಪ್ರತಿ ಕ್ಷೇತ್ರಗಳನ್ನು ಪ್ರವೇಶಿಸಲು

ಹಿಂಜರಿಯುತ್ತಿರುವುದು ಕಾಣಬರುವ ಸಂಗತಿ. ಕೆಲವರಿಗೆ ಇವು ಆಸಕ್ತಿದಾಯಕ ಕ್ಷೇತ್ರಗಳಲ್ಲ. ಇವು ಅಧಿಕ ಶ್ರಮ ತ್ಯಾಗವನ್ನು ಬಯಸುತ್ತವೆ. ೧೯೫೦-೭೦ರ ದಶಕದಲ್ಲಿ ಅನೇಕ ಹಿರಿಯ ವಿದ್ವಾಂಸರು ಗ್ರಂಥ ಸಂಪಾದನೆಯ ಕೆಲಸಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು. ಅಂಥವರಲ್ಲಿ ಎಂ.ಎಂ.ಕಲಬುರ್ಗಿ, ಚಿದಾನಂದಮೂರ್ತಿ, ವೆಂಕಟಾಚಲಶಾಸ್ತ್ರೀ ಮುಂತಾದವರ ಸಾಲಿಗೆ ಎಸ್.ಶಿವಣ್ಣನವರು ಸೇರುತ್ತಾರೆ. ಇವರು ಗ್ರಂಥಸಂಪಾದನೆಯ ಕೆಲಸಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ೨೦೦೮ನೇ ಇಸ್ವಿಯಲ್ಲಿ ಕೊನೆಯುಸಿರೆಳೆದರು. ಇವರ ನಂತರ ಈ ಕ್ಷೇತ್ರಕ್ಕೆ ದುಡಿಯುವವರ ಸಂಖ್ಯೆ ಕ್ಷೀಣಿಸಿದೆ. ಶಿವಣ್ಣನವರು ಗ್ರಂಥಸಂಪಾದನೆ ಕಾರ್ಯಕ್ಕೆ ಒಂದು ವೈಜ್ಞಾನಿಕ ತಳಹದಿಯನ್ನು ಹಾಕಿಕೊಟ್ಟರು.

ಹಸ್ತಪ್ರತಿ ಸೂಚಿ ರಚನೆ ಮತ್ತು ವಚನಸಾಹಿತ್ಯ ಸಂಪಾದನೆ ಕಾರ್ಯದಲ್ಲಿ ಕನ್ನಡ ಕಾಳಜಿ ಮತ್ತು ಪ್ರೇಮವನ್ನು ಮರೆಯುವಂತಿಲ್ಲ. ಇಲ್ಲಿಯವರೆಗೆ ಕರ್ನಾಟಕ ಕವಿಚರಿತೆಯಲ್ಲಿ ಉಲ್ಲೇಖವಾಗದ ಕವಿಗಳ, ವಚನಕಾರರ ಮತ್ತು ಅದರ ಕಾಲ, ವಚನಗಳನ್ನು ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸಿದ ಕೀರ್ತಿ ಎಸ್.ಶಿವಣ್ಣನವರಿಗೆ ಸಲ್ಲುತ್ತದೆ.

ಸರಳ ಸಜ್ಜನಿಕೆಯ ಎಲೆ ಮರೆಯ ಕಾಯಿಯಂತೆ ಇರುವ ಇವರ ವ್ಯಕ್ತಿತ್ವ ಮತ್ತು ಸಾಹಿತ್ಯ ಕೃಷಿ ಅದರಲ್ಲಿ ವಿಶೇಷವಾಗಿ ಅವರ ವಚನ ಸಾಹಿತ್ಯ ಸಂಪಾದನೆಯ ಬಗ್ಗೆ ಅವರು ಪಟ್ಟ ಶ್ರಮ ಮತ್ತು ಅವರ ಕಾರ್ಯವೈಖರಿಯನ್ನು ಬೆಳಕಿಗೆ ತರುವುದೇ ಈ ಅಧ್ಯಯನದ ಉದ್ದೇಶವಾಗಿದೆ.

## ವ್ಯಾಪ್ತಿ

ಶಿವಣ್ಣನವರ ವಚನ ಸಾಹಿತ್ಯ ಸಂಪಾದನೆಯಲ್ಲಿ ಕುಷ್ಟಗಿ ಕರಿಬಸವೇಶ್ವರ ವಚನಗಳು, ಚೆನ್ನಬಸವಣ್ಣನವರ ವಚನಗಳು, ವಚನ ಸಂಕಲನ ಸಂಪುಟ-೩.೪. ಹೊಸ ವಚನಗಳು ನೀಲಮ್ಮನ ವಚನಗಳು ಇವುಗಳ ಪರಿಷ್ಕರಣೆ ಕಾವ್ಯದ ರೀತಿ ಮತ್ತು ಅವುಗಳಲ್ಲಿ ಕೆಲವೊಂದು ವಚನಗಳನ್ನು ಆಯ್ದುಕೊಂಡು ಅವುಗಳ ವೈಶಿಷ್ಟ್ಯವನ್ನು ತಿಳಿಸುತ್ತಾ ಹೋಗಲಾಗಿದೆ.

ಇದರ ಜೊತೆಗೆ ಶಿವಣ್ಣನವರು ಪತ್ತೆಹಚ್ಚಿದ್ದ ಹೊಸವಚನ, ಕವಿ, ಕಾಲ ಇವುಗಳ ಬಗ್ಗೆ ಕೂಡ ಚರ್ಚಿಸಿ, ಇವರ ಸಂಪಾದನೆಯ ವೈಧಾನಿಕತೆಯನ್ನು ತಿಳಿಸಲಾಗಿದೆ.

## ಸ್ವರೂಪ

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ವಿವರಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಶ್ರೀ ಎಸ್.ಶಿವಣ್ಣನವರ ಜೀವನ ಮತ್ತು ಅವರು ಕೈಗೊಂಡ ಸಂಪಾದನೆ ಶ್ರಮವನ್ನು ಸಂಕ್ಷಿಪ್ತವಾಗಿ ಚಿತ್ರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ವಚನ ಸಾಹಿತ್ಯದ ಹುಟ್ಟು ಬೆಳವಣಿಗೆ ಮತ್ತು ಆಧುನಿಕ ಕವಿಗಳು ಕೂಡ ವಚನಗಳಿಗೆ ಮಾರು ಹೋಗಿ ಯಾವ ಯಾವ ವಚನಗಳನ್ನು ರಚಿಸಿದ್ದಾರೆ ಎಂಬುದನ್ನು ಈ ~~ಅಧ್ಯಾಯದಲ್ಲಿ~~ ಚಿತ್ರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕುಷ್ಟಗಿ ಕರಿಬಸವೇಶ್ವರನ ವಚನಗಳನ್ನು ಶಿವಣ್ಣನವರು ಸಂಪಾದಿಸಿರುವ ಬಗೆ ಹಾಗೂ ಅಲ್ಲಿನ ಕೆಲವು ವಚನಗಳನ್ನು ತೆಗೆದುಕೊಂಡು ಅವುಗಳ ತಾತ್ಪರ್ಯ ಮತ್ತು ವೈಶಿಷ್ಟ್ಯವನ್ನು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಚೆನ್ನಬಸವಣ್ಣನವರ ವಚನಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಇದರಲ್ಲಿ ಒಟ್ಟು ೧೪೫ ವಚನಗಳಿವೆ. ಅವುಗಳಲ್ಲಿ ೫೩ ಅಪ್ರಕಟಿತ ವಚನಗಳಿವೆ. ಒಟ್ಟಾರೆ ಈ ಕೃತಿಯಲ್ಲಿನ ಆಯ್ದ ವಚನಗಳನ್ನು ಮಾತ್ರ ವಿಶ್ಲೇಷಿಸಿ ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ವಚನ ಸಂಕಲನ ಸಂಪುಟ-೩ ಮತ್ತು ೪ನ್ನು ಕುರಿತು ಚರ್ಚಿಸಲಾಗಿದೆ. ವಚನ ಸಂಪುಟ-೩ರಲ್ಲಿ ಪ್ರಭುದೇವರ ಸ್ತೋತ್ರದ ವಚನ ೧೦೮ ಇದ್ದು. ಶಿವನ ಬಿರುದಾವಳಿ ಸ್ತೋತ್ರದ ವಚನ ೧೧೧ ಇದ್ದು, ಅದರಲ್ಲಿ ಕೆಲವನ್ನು ಮಾತ್ರ ಆಯ್ದುಕೊಂಡು ವಿವೇಚಿಸಲಾಗಿದೆ.

ವಚನ ಸಂಕಲನ ಸಂ-೪ರಲ್ಲಿ ಮಿಶ್ರ ಷಟ್ಸ್ಥಲದ ವಚನ, ಟೀಕಿನ ಏಕೋತ್ತರ ಶತಸ್ಥಲ ವಚನ. ಸಕಲ ಪುರಾತನರ ವಚನಗಳೆಂಬ ಮೂರು ಭಾಗಗಳಿದ್ದು ಇವುಗಳಲ್ಲಿ ಕೆಲವು ವಚನಗಳ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ ಏಳರಲ್ಲಿ ಹೊಸ ವಚನಗಳಲ್ಲಿ ಇದುವರೆಗೂ ಬೆಳಕಿಗೆ ಬಾರದ ಕೆಲವು ವಚನಗಳನ್ನು ತಿಳಿಸಲಾಗಿದೆ. ಇದರಲ್ಲಿ ಒಟ್ಟು ೧೧ ಜನ ವಚನಕಾರರ ಬಗ್ಗೆ ಇರುವ ವಚನಗಳಿವೆ.

ಅಧ್ಯಾಯ ಎಂಟರಲ್ಲಿ ನೀಲಮ್ಮನ ವಚನಗಳನ್ನು ಕುರಿತು ತಿಳಿಸಲಾಗಿದೆ. ಇದರಲ್ಲಿ ಒಟ್ಟು ೨೮೮ ವಚನಗಳಿದ್ದು, ಅವುಗಳಲ್ಲಿ ಕೆಲವನ್ನು ಮಾತ್ರ ವಿಶ್ಲೇಷಿಸಲಾಗಿದೆ.

ಅಧ್ಯಾಯ ಒಂಭತ್ತರಲ್ಲಿ ಶಿವಣ್ಣನವರು ಯಾವ ನೆಲೆಯಿಂದ ವಚನಗಳನ್ನು ಸಂಪಾದಿಸಿದರು. ಆ ವಚನಗಳೆಲ್ಲ ಏನನ್ನು ಒಳಗೊಂಡಿವೆ ಎಂಬುದನ್ನು ತಿಳಿಸಲಾಗಿದೆ.

ಅಧ್ಯಾಯ ಹತ್ತರಲ್ಲಿ ಒಟ್ಟು ಅಧ್ಯಯನದ ಫಲಿತತೆಯನ್ನು ಕಂಡುಕೊಳ್ಳಲಾಗಿದೆ.

# ಅಧ್ಯಾಯ ೨

# ಶಿವಣ್ಣನವರ ಬದುಕು-ಬರಹ

೨

# ಶಿವಣ್ಣನವರ ಬದುಕು-ಬರಹ

ಕಲ್ಯಾಣನಗರ ಎಂದು ಪ್ರಖ್ಯಾತವಾದ ಬೆಂಗಳೂರು ಅರಳಪೇಟೆ 'ಶಂಕರಣ್ಣ' ಕುಟುಂಬದವರು ವ್ಯಾಪಾರಕ್ಕೆ, ವಿದ್ಯೆಗೆ, ಬುದ್ಧಿವಂತಿಕೆಗೆ ಪ್ರಸಿದ್ಧರು. ಈ ಮನೆತನದವರು ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ನಿಷ್ಠೆಗಾಗಿ ಶಿವಪೂಜೆ, ಶಿವಧ್ಯಾನ, ಬಸವಾದಿ ಪ್ರಮಥರ ತತ್ತ್ವಚಿಂತನೆ ಮಾಡುತ್ತಾ ಬಂದವರು. ಇಂತಹ ಪ್ರಸಿದ್ಧ ಮನೆತನದ ಲಿಂ || ಬಿ.ಗುರುಶಂಕರಪ್ಪನವರ ಮನೆ ಅಳಿಯನಾಗಿ ಅತ್ತಿಬೆಲೆ ಸಾಹುಕಾರ್ ಶರಭಣ್ಣನವರ ಮಗಳು ಗೌರಮ್ಮ(ಸಿದ್ಧಮ್ಮ)ನ ವಿವಾಹವಾಗಿ ಅಲ್ಲಿಯೇ ನೆಲೆಸಿದರು. ಈ ಶಿವಭಕ್ತ ದಂಪತಿಗಳ ದ್ವಿತೀಯ ಪುತ್ರರೆ ಶ್ರೀ ಶಿವಾನಂದ ಶಂಕರಪ್ಪ. ಇದು ಇವರ ಹುಟ್ಟು ಹೆಸರು. ಮುಂದೆ ಇವರು ಈ ಹೆಸರನ್ನು ಬಿಟ್ಟು ಶ್ರೀ ಎಸ್.ಶಿವಣ್ಣ ಅನ್ನುವ ಹೆಸರೇ ಬಳಸಲು ಆರಂಭಿಸಿದರು. ೧-೨-೧೯೪೦ರಲ್ಲಿ ಜನಿಸಿದ ಶ್ರೀ ಎಸ್.ಶಿವಣ್ಣನವರ ಬಾಲ್ಯ ವಿದ್ಯಾಭ್ಯಾಸ ಅತ್ತಿಬೆಲೆಯಲ್ಲಿ ನಡೆಯಿತು. ಮೈಸೂರು ನಗರದಲ್ಲಿ ಕನ್ನಡದಲ್ಲಿ ಎಂ.ಎ ಮುಗಿಸಿದ್ದು, ೧೯೬೩-೧೯೬೪ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ೧೯೭೦ರವರೆಗೆ ಸಂಶೋಧನಾ ವಿದ್ಯಾರ್ಥಿಯಾಗಿ ಸೇವೆ ಸಲ್ಲಿಸಿದರು. ಡಾ.ಎಲ್.ಬಸವರಾಜುರವರ ಮಾರ್ಗದರ್ಶನದಲ್ಲಿ ಪಂಪನ ಬಗ್ಗೆ ವಿಶೇಷ ವ್ಯಾಸಂಗ ಪ್ರಾರಂಭಿಸಿದರು. ಮಹಾಪ್ರಬಂಧದ ಬರವಣಿಗೆ ಮುಕ್ತಾಯ ಹಂತಕ್ಕೆ ತಲುಪಿತ್ತು. ನಾನಾ ಕಾರಣಗಳಿಂದ ಮಹಾಪ್ರಬಂಧದ ಅಧ್ಯಯನ ಮುಗಿಯಲಿಲ್ಲ.

ವಿದ್ಯಾರ್ಥಿ ಜೀವನ ಮುಗಿಸಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧಕ ವಿದ್ಯಾರ್ಥಿಯಾಗಿ ಕೆಲಸ ಮಾಡುತ್ತಿರುವಾಗಲೇ ೧೯೬೭ರಲ್ಲಿ "ಕರ್ನಾಟಕ ಕವಿಚರಿತೆಯ ಅನುಕ್ತಕೃತಿಸೂಚಿ" ಪ್ರಕಟವಾಯಿತು. ಸಂಶೋಧನಾ ವಿದ್ಯಾರ್ಥಿ ಜೀವನದಲ್ಲೇ ಹಿರಿಯ ವಿದ್ವಾಂಸರ ಸಂಪರ್ಕ ಬೆಳೆಯಿತು. ಡಾ.ಡಿ.ಎಲ್. ನರಸಿಂಹಾಚಾರ್ ಅವರ ವೈಯಕ್ತಿಕ ಸಂಗ್ರಹದ ಹಸ್ತಸೂಚಿ ಸಿದ್ಧಪಡಿಸಿ, ಅವರಿಂದ ಬೆನ್ನು ತಟ್ಟಿಸಿಕೊಂಡವರು. ತಮ್ಮ ಜೀವಿತಾವಧಿಯಲ್ಲಿ ಸಹಸ್ರಾರು ಓಲೆಗರಿ ಮತ್ತು ಕಾಗದದ ಹಸ್ತಪ್ರತಿಗಳನ್ನು ಪರಿಶೀಲಿಸಿ ವಿಶೇಷ ಲೇಖನಗಳನ್ನು ಬರೆದರು. ಕರ್ನಾಟಕ ರಾಜ್ಯದ ಎಲ್ಲ ಹಸ್ತಪ್ರತಿ ಭಂಡಾರವನ್ನು ಪರಿಶೀಲಿಸುವ ಭಾಗ್ಯವನ್ನು ಕೇಳಿಕೊಂಡು ಬಂದ ವಿದ್ವಾಂಸರಲ್ಲಿ ಎಸ್.ಶಿವಣ್ಣನವರಿಗೆ ವಿಶೇಷವಾದ ಸ್ಥಾನವಿದೆ.

ಬಸವಾದಿ ಪ್ರಮಥರ ವಚನ ಸಾಹಿತ್ಯದ ಮೇಲೆ, ಸ್ವರವಚನಗಳ ಮೇಲೆ ಬಹಳ ಆಸಕ್ತಿ, ಆ ದೃಷ್ಟಿಯಿಂದ ಅವರು ಬರೆದ ನೂರಾರು ಲೇಖನಗಳು ನಮಗೆ ವಿಶೇಷ ಮಾಹಿತಿ ನೀಡುತ್ತವೆ.

ಡಾ.ರಾವ್‌ಬಹದ್ದೂರ್ ನರಸಿಂಹಚಾರ್‌ರವರ ಕವಿಚರಿತೆ ಸಂಪುಟಗಳನ್ನು ಮೇಲಿಂದ ಮೇಲೆ ಅಧ್ಯಯನ ಮಾಡಿ ಕವಿಕಾಲ ವಿಚಾರವನ್ನು ತಮ್ಮ ತುದಿ ಬೆರಳಿನಲ್ಲಿ ಇಟ್ಟುಕೊಂಡಿದ್ದರು.[೧]

ಉತ್ತರ ದೇಶದ ಬಸವಲಿಂಗನ ಕಾಲ ವಿಚಾರ ತೊಂಟದ ಸಿದ್ಧಲಿಂಗರ ಕಾಲವನ್ನು ಕುರಿತ ಕೆಲವು ಟಿಪ್ಪಣಿಗಳು, ತೊಂಟದ ಸಿದ್ಧಲಿಂಗರ ಕಾಲ ನಿರ್ಣಯಕ್ಕೆ ಸಂಬಂಧಿಸಿದ ಸಮಕಾಲೀನ ಸಾಕ್ಷ್ಯ ತೋಂಟದ ಸಿದ್ಧಲಿಂಗೇಶ್ವರ, ಕಾಲ ವಿಚಾರ ಒಂದು ಮರು ಪರಿಶೀಲನೆಗೆ ನಿಜಗುಣರ ಕಾಲ, ನೇಮರಸರ ಕಾಲ ವಿಚಾರ, ಶಾಂತ ಮಲ್ಲಸ್ವಾಮಿಗಳ ಕಾಲ ವಿಚಾರ, ಸರ್ವಜ್ಞನ ಕಾಲದ ಬಗೆಗೆ, ಪರ್ವತ ಶಿವಯೋಗಿ ಕಾಲ ವಿಚಾರ ಹಸ್ತಪ್ರತಿಗಳಿಂದ ವಿಷಯವನ್ನು ಪತ್ತೆಹಚ್ಚಿ ಕಾಲನಿರ್ಣಯವನ್ನು ಪರಿಹರಿಸಿದ್ದಾರೆ.

ಶಾಂತರಸರು ಸಾಹಿತ್ಯ ಅಕಾಡಮಿ ಅಧ್ಯಕ್ಷರಾಗಿದ್ದಾಗ ಶ್ರೀ ಎಸ್.ಶಿವಣ್ಣನವರ ಸಂಗ್ರಹ ಗಮನಿಸಿ "ಅಪ್ರಕಟಿತ ವಚನಗಳ" ಒಂದು ಸಂಪುಟವನ್ನೇ ಸಂಪಾದಿಸಿಕೊಡುವಂತೆ ಹೇಳಿ ಪ್ರಕಟಿಸಿದರು. ಅಂದಿನ ದಿನಮಾನಕ್ಕೆ ಸಮಗ್ರ ವಚನ ಸಂಪುಟದ ಎರಡನೇ ಆವೃತ್ತಿ ಬಂದಿರಲಿಲ್ಲ. ಎಸ್.ಶಿವಣ್ಣನವರು ಸಮಗ್ರ ವಚನ ಸಂಪುಟದಲ್ಲಿ ಇಲ್ಲದ ವಚನಗಳ ಒಂದು ಸಂಪುಟಕ್ಕೆ ತಮ್ಮ ಪಾಲಿನ ಸೇವೆ ಸಲ್ಲಿಸಿದರು. "ಬಿಡು ಮುತ್ತು" ಸಂಪುಟದಲ್ಲಿ ವಚನಗಳ ಬಗೆಗೆ ಇಪ್ಪತ್ತೆಂಟು ಲೇಖನ ಪ್ರಕಟಗೊಂಡಿವೆ.

'ಸ್ವರ ವಚನಗಳ' ಬಗ್ಗೆ ವಿಶೇಷವಾದ ಅಧ್ಯಯನ ಮಾಡಿದ ಕೀರ್ತಿ ಶ್ರೀ ಎಸ್.ಶಿವಣ್ಣನವರದು ಮೈಸೂರು ಸುತ್ತೂರು ಮಠದ ವತಿಯಿಂದ ಪ್ರಕಟವಾದ ಸ್ವರ ವಚನಗಳ ಸಂಪುಟಗಳಲ್ಲಿ ಮೊದಲ ಎರಡು ಸಂಪುಟಗಳ ಸಂಪಾದಕರು ಇವರು. ಈ ಕೃತಿಗಳಿಗೆ ಸಾಹಿತ್ಯ ಅಕಾಡಮಿ ಬಹುಮಾನವು ಬಂದಿದೆ. ನೂರಾರು ಸ್ವರ ವಚನಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಇಟ್ಟುಕೊಂಡಿದ್ದರು. ಗದುಗಿನ ತೋಂಟದಾರ್ಯ ಮಠದಿಂದ ಶಿವಮೊಗ್ಗ ಬೆಕ್ಕಿನ ಕಲ್ಲುಮಠದಿಂದ ಶ್ರೀ ಎಸ್.ಶಿವಣ್ಣನವರು ಸಂಪಾದಿಸಿದ ಸ್ವರವಚನ ಸಂಪುಟಗಳು ಪ್ರಕಟಗೊಂಡಿವೆ.

ಗದಗಿನ ತೋಂಟದಾರ್ಯ ಮಠದ ಹಸ್ತಪ್ರತಿಸೂಚಿ ಸಂ.೧ರಲ್ಲಿ ಒಟ್ಟು ೧೩೯೭ ಕೃತಿಗಳನ್ನು ಪರಿಚಯಿಸಿಕೊಡುತ್ತಾರೆ. ಕನ್ನಡವಲ್ಲದೆ ಬೇರೆ ಭಾಷೆಯ ಕೃತಿಗಳೂ ಸೇರಿವೆ. ಇದುವರೆಗೂ ಎಲ್ಲೂ ದೊರೆಯದ ಮೂವತ್ತೈದು ಜನ ಕವಿಗಳನ್ನು ಬೆಳಕಿಗೆ ತಂದಿದ್ದಾರೆ.

ಚಿತ್ರದುರ್ಗದ ಬೃಹನ್ಮಠದ ಹಸ್ತಪ್ರತಿಸೂಚಿ ಕೂಡ ಸುಮಾರು ೩೬೦೦ ಕೃತಿಗಳನ್ನು ದಾಖಲಿಸಿಕೊಂಡಿದೆ. ಇದರಲ್ಲಿನ ಅನುಬಂಧದಲ್ಲಿ ಪುಷ್ಟಿಕೆಗಳು ಸ್ಥಳಸೂಚಿ ಮುಂತಾದವನ್ನು ನೀಡಿ ಆಕರ ಯೋಗ್ಯ ಕೃತಿಯನ್ನಾಗಿಸಿದ್ದಾರೆ. ಈ ಸೂಚಿಯಲ್ಲಿ ಬಹುಮುಖೀ ಅಧ್ಯಯನದ ಜಾಡನ್ನು ಗುರುತಿಸಬಹುದು.

ಇವರ ಇನ್ನೊಂದು ಮಹತ್ವದ ಕೃತಿ "ವೀರಶೈವ ಅಪ್ರಕಟಿತ ಗ್ರಂಥಸೂಚಿ". ಇದರಲ್ಲಿ ಏಳು ಉಪವಿಭಾಗಗಳನ್ನು ಮಾಡಿಕೊಂಡು ಕೃತಿಗಳನ್ನು ಪರಿಚಯಿಸುತ್ತಾರೆ. ಆದಿಯಿಂದ ಕ್ರಿ.ಶ.೧೯೦೦ರವರೆಗೆ ರಚನೆಯಾದ ಕೃತಿಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಇದರಲ್ಲಿ ಒಟ್ಟು ೧೭೭೩ ಕೃತಿಗಳನ್ನು ಸೂಚೀಕರಿಸಿದ್ದಾರೆ. ಹಲವಾರು ಜನರು ಮಾಡಬೇಕಾದ ಈ ಕಾರ್ಯವನ್ನು ಒಬ್ಬರೇ ನಿರ್ವಹಿಸುವುದು ಅವರ ಶ್ರಮಸಂಸ್ಕೃತಿಗೆ ಸಾಕ್ಷಿಯಾಗಿದೆ.

ಎಸ್.ಶಿವಣ್ಣನವರ "ಮುರಿಗೆ ಶಾಂತವೀರ ಸ್ವಾಮಿಗಳ ಕೃತಿಗಳು" ಒಂದು ಅತ್ಯುತ್ತಮ ಸಂಪಾದಿತ ಕೃತಿಯಾಗಿದೆ. ಸ್ವಾಮಿಗಳ ಹತ್ತು ಲಘುಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ಕೇವಲ ಕೃತಿಗಳನ್ನು ಮಾತ್ರವಲ್ಲದೆ ಆ ಕೃತಿಗಳಿಗೆ ರಚನೆಯಾಗಿರುವ ಟೀಕೆಯನ್ನು ನೀಡಿರುವುದು ಕೃತಿಯ ಪ್ರಯೋಜನ ಇಮ್ಮಡಿಯಾಗಿಸಿದೆ.[೨]

"ಸ್ವರವಚನ ಸಂಪುಟಗಳು" ಪ್ರಕಟವಾದ ಪರಿಣಾಮವಾಗಿ ಸಂಗೀತ ಮತ್ತು ಸಾಹಿತ್ಯದ ಕೊಳುಕೊಡೆಗಳ ಅಧ್ಯಯನದ ವ್ಯಾಪ್ತಿ ಹೆಚ್ಚಾದಂತಾಗಿದೆ. ಇದರಲ್ಲಿ ವಚನಕಾರರ ಸಂಗೀತ ಜ್ಞಾನದ ಹರಹು ನಮ್ಮನ್ನು ಬೆರಗುಗೊಳಿಸುತ್ತದೆ. ಸ್ಥಳೀಯ ಇತಿಹಾಸ ರಚನೆಗೆ ಇವು ಹೊಸ ಆಕರಗಳಾಗಿವೆ.

ಸಂಸ್ಕೃತಿ ಇಲಾಖೆ ಪ್ರಕಟಿಸಿರುವ ಸಮಗ್ರ ವಚನ ಸಂಪುಟಗಳಲ್ಲಿ "ಸಂಕೀರ್ಣ ವಚನ ಸಂಪುಟ-೬"ನ್ನು ಸಂಪಾದಿಸಿರುವ ಶಿವಣ್ಣನವರು ಅನೇಕ ಅಪ್ರಕಟಿತ ವಚನಗಳನ್ನು ಮೊದಲಬಾರಿಗೆ ನೀಡಿದ್ದಾರೆ.

ಅಕಾಡಮಿಯ ಇತ್ತೀಚಿನ ಪ್ರಕಟನೆಯಾದ "ಹೊಸ ವಚನಗಳು" ಎಂಬ ಕೃತಿಯೂ ಕೂಡ ಎಸ್ .ಶಿವಣ್ಣನವರ ಶ್ರಮದ ಪ್ರತಿಫಲವಾಗಿದೆ. ಇಲ್ಲಿ ಹಲವಾರು ವಚನಕಾರರ ಸುಮಾರು ೩೧೧ ಹೊಸ ವಚನಗಳನ್ನು ಸಂಕಲಿಸಿಕೊಟ್ಟಿದ್ದಾರೆ.

"ವೀರಶೈವ ಹಸ್ತಪ್ರತಿ ಪುಷ್ಟಿಕೆಗಳು" ಇವರ ಇನ್ನೊಂದು ಮಹತ್ವದ ಕೃತಿಯಾಗಿದೆ. ಇದೊಂದು ಹಸ್ತಪ್ರತಿ ಅಧ್ಯಯನದ ವಿನೂತನ ಶಾಖೆಯಾಗಿದೆ. ಹಸ್ತಪ್ರತಿಗಳ ಅಂತ್ಯಗಳಲ್ಲಿ ಬರುವ ಕವಿಗಳ, ಪ್ರತಿಕಾರರ ವಿಷಯಗಳು ಆಯಾ ಕಾಲದ ವಿವರಗಳನ್ನು ನೀಡುತ್ತವೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಇಲ್ಲಿ ೨೩೧೬ ಕೃತಿಗಳನ್ನು ಬಳಸಿಕೊಳ್ಳಲಾಗಿದೆ.

ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿಸೂಚಿ ೭೧೧+(೮) ಓಲೆಕಟ್ಟುಗಳಿಗೆ ಸಂಬಂಧಿಸಿದ ವಿವರಗಳನ್ನು ಒಳಗೊಂಡಿವೆ ಈ ಸೂಚಿಯಲ್ಲಿಯ ಕನ್ನಡ ಹಸ್ತಪ್ರತಿಗಳ ಸಂಖ್ಯೆ ೩೬೦೦ ಕನ್ನಡ, ಸಂಸ್ಕೃತ ಮತ್ತು ಹಿಂದಿಭಾಷೆಗಳಲ್ಲಿನ ಕೃತಿಗಳ ಸಂಖ್ಯೆ ಕ್ರಮವಾಗಿ ೧೦೩೭, ೧೧ ಹಾಗೂ ೧. ದೇವನಾಗರಿ ಲಿಪಿಯಲ್ಲಿಯ ಸಂಸ್ಕೃತ ಭಾಷೆಯ ಕೃತಿಗಳು ೧೨, ಒಟ್ಟು ಕೃತಿಗಳು ೪೬೬೧.

ಕವಿಚರಿತ್ರೆಯಲ್ಲಿ ಉಕ್ತರಾಗದ ಬಹಳಷ್ಟು ಕವಿಗಳ ಉಲ್ಲೇಖ ಈ ಸೂಚಿಯಲ್ಲಿ ದೊರಕುತ್ತವೆ. ಸೂಚಿಯ ಅನುಬಂಧದಲ್ಲಿ ಪುಷ್ಪಿಕೆಗಳು, ಸ್ಥಳ, ಸೂಚಿ ಮುಂತಾದವನ್ನು ನೀಡಿರುವುದರಿಂದ ಸಂಸ್ಕೃತಿಯ ಅಧ್ಯಯನಕ್ಕೆ ಆಕಾರವಾಗಿ ಬಳಸಿಕೊಳ್ಳಬಹುದು. ಇದರ ೪೩೩ ಓಲೆ ಹಾಗೂ ಕಾಗದದ ಕಟ್ಟುಗಳಿಗೆ ಸಂಬಂಧಿಸಿದ ವಿವರಗಳನ್ನು ದಾಖಲಿಸಲಾಗಿದೆ. ಕನ್ನಡ ಹಸ್ತಪ್ರತಿಗಳು ಸಂಖ್ಯೆ ೨೫೬ ಒಟ್ಟು ೧೩೯೭ ಕೃತಿಗಳ ಪರಿಚಯ ಮಾಡಿಕೊಡಲಾಗಿದೆ. ಕವಿ ಚರಿತ್ರೆ ಹಾಗೂ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗದ ಮೂವತ್ತೈದು ಕವಿಗಳನ್ನು ಈ ಸೂಚಿಯಲ್ಲಿ ಶಿವಣ್ಣನವರು ದಾಖಲಿಸಿದ್ದಾರೆ.[೨]

## ಹಸ್ತಪ್ರತಿಸೂಚಿ

ಈ ಸೂಚಿ ತಯಾರಿಸುವಾಗ ಶಿವಣ್ಣನವರು ಕನ್ನಡ ಸಾಹಿತ್ಯಪರಿಷತ್‌ನ ಹಸ್ತಪ್ರತಿ ಸಂಗ್ರಹಾಲಯದಲ್ಲಿದ್ದ ೫೦೬ ಓಲೆ ಹಾಗೂ ಕಾಗದದ ಕಟ್ಟುಗಳಲ್ಲಿದ್ದ ವಿವರಗಳೀವೆ. ಕನ್ನಡ ಕೃತಿ ಸಂಖ್ಯೆ ೮೪೭. ಕನ್ನಡ ಲಿಪಿಯಲ್ಲಿರುವ ಸಂಸ್ಕೃತ, ತೆಲುಗು, ತಮಿಳು, ಪ್ರಾಕೃತ ಭಾಷೆಗಳಲ್ಲಿನ ಕೃತಿ ಸಂಖ್ಯೆ ೪೪೦. ಕವಿಚರಿತ್ರೆಯಲ್ಲಿ ಉಲ್ಲೇಖವಾಗದ ಹಲವಾರು ಕವಿಗಳು ಹಾಗೂ ಕೃತಿಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

## ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ

ಈ ಸೂಚಿಯನ್ನು ವೈಜ್ಞಾನಿಕ ರೀತಿಯಲ್ಲಿ ಸಿದ್ದಪಡಿಸಿರುವುದರಿಂದ ಮಹತ್ತರವಾಗಿದೆ. ಈ ಸೂಚಿಯು ಕೃತಿಯ ಬಗೆಗೆ, ಹಸ್ತಪ್ರತಿಯ ಬಗೆಗೆ ಎಲ್ಲಾ ವಿವರಗಳನ್ನು ತಿಳಿಸಿಕೊಡುತ್ತದೆ. ಸೂಚಿಗಿಂತ ವಿವರಣಾತ್ಮಕ ಸೂಚಿ ಹೆಚ್ಚು ಪ್ರಯೋಜನಕಾರಿ. ಈ ಕೃತಿ ಇಲ್ಲಿಯವರೆಗೂ ಹಸ್ತಪ್ರತಿ ಕ್ಷೇತ್ರದಲ್ಲಿ ಪ್ರಕಟವಾಗಿರುವ ವರ್ಣನಾತ್ಮಕ ಸೂಚಿಗಳ ಶಾಸ್ತ್ರೀಯ ಕ್ರಮವನ್ನು ಅನುಸರಿಸಿದೆ. ಈ ಸೂಚಿಯು ಕರ್ತೃ, ಕೃತಿ, ಕಾಲ, ಭಾಷೆ, ಲಿಪಿ. ಪತ್ರ ಸಂಖ್ಯೆ, ಇರುವ ಸಾಲುಗಳು, ಹರಿದ ಹಾಳೆಯ ವಿವರ, ವಸ್ತುವಿಷಯ, ಶುದ್ಧ, ಅಶುದ್ಧ, ಪ್ರತಿಮಾಡಿದವರ ಹೆಸರು, ದೊರೆತ ಸ್ಥಳ, ಆದಿ ಅಂತ್ಯ, ಕವಿಯ ಹೆಸರು, ಕಾಲ, ಪ್ರತಿಕಾರರ ಸಮಗ್ರ ವಿವರಗಳನ್ನು ಒಳಗೊಂಡಿದೆ. ಈ ಕೃತಿಯು ಒಟ್ಟು ೪೪೯ ಹಸ್ತಪ್ರತಿಗಳ ಸವಿವರ ಒಳಗೊಂಡಿದೆ.

## ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿ ಸೂಚಿ

ಅರ್.ನರಸಿಂಹಚಾರ್ಯರ ಕವಿಚರಿತ್ರೆಯ ಮೂರು ಸಂಪುಟಗಳಲ್ಲಿ ಇಲ್ಲದ ಸುಮಾರು ೨೭೭೯ ಕೃತಿಗಳ ಪಟ್ಟಿಯನ್ನು ಒಳಗೊಂಡಿದೆ. ವಿವಿಧ ಮೂಲಗಳಿಂದ ಹಸ್ತಪ್ರತಿಗಳನ್ನು ಪರಿಶೀಲಿಸಿ, ಆಕರಗಳಿಂದ ಸಾಮಗ್ರಿಯನ್ನು ಕಲೆಹಾಕಲಾಗಿದೆ. ಕವಿಚರಿತ್ರೆಯ ಸಂಪುಟಗಳಲ್ಲಿ ಇರದೆ ಇರುವ ಅಲ್ಲಲ್ಲಿ ಚದುರಿ

ಹೋಗಿರುವ ಹಾಗೂ ಹಸ್ತಪ್ರತಿಗಳಲ್ಲಿಯೇ ಅಡಗಿ ಕುಳಿತಿರುವ ಕೃತಿಗಳ ಅಂಶತಃ ಪರಿಚಯ ಈ ಅನುಕ್ತ ಕೃತಿಸೂಚಿಯಲ್ಲಿ ಮಾಡಲಾಗಿದೆ. ಇಂತ ಕೃತಿಯು ಕನ್ನಡ ಭಾಷೆಯಲ್ಲಿಯೇ ಪ್ರಥಮ ಎಂದರೂ ತಪ್ಪಾಗಲಾರದು. ಇದನ್ನು ಮಾಡಿದ ಕೀರ್ತಿ ಶ್ರೀ.ಎಸ್.ಶಿವಣ್ಣನವರಿಗೆ ಸಲ್ಲುತ್ತದೆ.

### ಮುರಿಗೆ ಶಾಂತವೀರಸ್ವಾಮಿಗಳ ಸ್ತೋತ್ರಕದಂಡ

ಇದು ಶಾಸ್ತ್ರೀಯ ಉನ್ನತಿಯಲ್ಲಿ ಸಂಪಾದಿತವಾದ ಕೃತಿ. ಮುರಿಗೆ ಶಾಂತವೀರಸ್ವಾಮಿಗಳನ್ನು ಕುರಿತು.

೧. ಮಹಂತ ಸ್ವಾಮಿಗಳು ನಿರೂಪಿಸಿದ ನಾಂದ್ಯ, ೨. ಕಂಪಿನಂಜಯ್ಯನ ನಾಂದ್ಯ, ೩. ಮುರಿಗೆ ಸ್ವಾಮಿಗಳು ನಿರೂಪಿಸಿದ ನಾಂದ್ಯ, ೪. ಮುರಿಗೆ ಶಾಂತವೀರೇಶ್ವರನ ಕಂದ, ೫. ಗುರು ಮುರಿಗೇಂದ್ರ ಷಟ್ಪದಿ(ಸಟೀಕ), ೬. ತರಳವೃತ್ತ, ೭. ಮಂಗಳಜ್ಯೋತಿ ಅಷ್ಟಕ, ೮. ಮುರಿಗೆ ಸ್ವಾಮಿಗಳ ಯಕ್ಷಗಾನ ಇತ್ಯಾದಿ ಎಂಟು ಕೃತಿಗಳನ್ನು ಮುರಿಗೆ ಶಾಂತವೀರ ಸ್ವಾಮಿಗಳ ಸ್ತೋತ್ರಕದಂಡ ಎಂಬ ಹೆಸರಿನಲ್ಲಿ ಸಂಪಾದಿಸಿದ್ದಾರೆ.

ಈ ಕೃತಿ ರಚಿಸಲು ಶಿವಣ್ಣವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಹಾಗೂ ಮಹಾರಾಜ ಸಂಸ್ಕೃತ ಪಾಠಶಾಲೆ ಹಾಗೂ ಧಾರವಾಡದ ವಚನ ವಾಙ್ಮಯ ಭಂಡಾರದಲ್ಲಿಯ ಹಸ್ತಪ್ರತಿಗಳನ್ನು ಉಪಯೋಗಿಸಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ.

### ಸ್ವರವಚನ ಸಂಪುಟ-೧

ಸಂಸ್ಥೆಗಳು, ಮಠಗಳು ಹಾಗೂ ವ್ಯಕ್ತಿಗಳು ವೈಯಕ್ತಿಕ ಸಂಗ್ರಹದಲ್ಲಿದ್ದ ವಿವಿಧ ಹಸ್ತಪ್ರತಿಗಳನ್ನುಪಯೋಗಿಸಿ ಒಟ್ಟು ೩೬೭ ಸ್ವರವಚನಗಳನ್ನು ಸಂಪಾದಿಸಿದ್ದಾರೆ. ಇದರಲ್ಲಿ ಕಾಲದ ದೃಷ್ಟಿಯಿಂದ ಕ್ರಿ.ಶ.೧೧೬೦ರಲ್ಲಿದ್ದ ಬಸವಣ್ಣನವರ ವಿಚಾರ ಪತ್ನಿ ನೀಲಮ್ಮನಿಂದ ಹಿಡಿದು ಕ್ರಿ.ಶ.೧೮೭೦ ಕಾಲದ ಗುರುಪಾದೇಶನ ವರೆಗಿನ ಸ್ವರವಚನಕಾರರ ೨೬೭ ಸ್ವರವಚನಗಳಿವೆ.

### ಸ್ವರ ವಚನ ಸಂಪುಟ ೨

ಇದರಲ್ಲಿ ಕಾಲದ ದೃಷ್ಟಿಯಿಂದ ಕ್ರಿ.ಶ.೧೧೬೦ರಲ್ಲಿದ್ದ ಅಕ್ಕಮಹಾದೇವಿಯಿಂದ ಹಿಡಿದು ಕ್ರಿ.ಶ.೧೮೭೫-೭೬ರ ಅಜ್ಞಾತ 'ಕಂಪಲಿ ರಾಮಲಿಂಗ' ಅಂಕಿತದ ಸ್ವರವಚನಕಾರನವರೆಗಿನ ೨೦೦ ಸ್ವರವಚನಗಳಿವೆ.[೪]

## ಕೆಲವು ಕವಿಗಳ ಕಾಲದ ಬಗ್ಗೆ ಶಿವಣ್ಣನವರ ಚರ್ಚೆ

### ೧. ಅವಧೂತ ಶಿವಯೋಗಿ-ಕಾಲ ವಿಚಾರ

ಇವರು ಹಲವಾರು ಕೃತಿಗಳನ್ನು ರಚಿಸಿದ್ದು ಅವುಗಳಲ್ಲಿ "ಕೈವಲ್ಯನ್ವಯನಾದ" ಒಂದಾಗಿದೆ. ಈತನ ಕಾಲವನ್ನು ಆರ್.ನರಸಿಂಹಚಾರ್ ರವರು ತೃತೀಯ ಸಂಪುಟದಲ್ಲಿ ಪು.೯೧ರಲ್ಲಿ ೧೭೫೦ ಆಗಿರಬಹುದೆಂದು ತಿಳಿಸಿದ್ದಾರೆ.

'ಕೈವಲ್ಯಾನ್ವಯ ಸಾರಕ್ಕೆ', 'ಆನಂದ ಕಲ್ಲೋಲ'ವೆಂಬ ಮತ್ತೊಂದು ಹೆಸರಿದೆ. ಈ ಕೃತಿಯ ಪ್ರತಿಯೊಂದು ಕಡೆಯಲ್ಲಿ 'ಶಕ ೧೬೧೩ನೇ ಪ್ರವರ್ತಮಾನೆ ಪ್ರಜಾಪತಿ ನಾಮಸಂವತ್ಸರ ವೈಶಾಖದಲ್ಲಿ ಕಾಶೀಪತಿ ಗುರುನಾಥನು ಕಾಪೀ ಮಾಡಿದ ಪ್ರತಿ ಸಮಾಪ್ತ ಎಂದಿದೆ. ಇದರಿಂದ 'ಆನಂದ ಕಲ್ಲೋಲ'ದ ಪ್ರತಿಯೊಂದರ ಕಾಲ ಕ್ರಿ.ಶ.೧೬೯೧-೯೨ ಆಗಿತ್ತು. ಆದ್ದರಿಂದ ಅವಧೂತ ಶಿವಯೋಗಿಯ ಕಾಲ ಕ್ರಿ.ಶ.೧೬೯೧-೯೨ಕ್ಕಿಂತ ಎಂಬುದರಲ್ಲಿ ಸಂದೇಹವಿಲ್ಲ. ಅದಕ್ಕಾಗಿ ಅವರ ಕಾಲವನ್ನು ಶಿವಣ್ಣನವರು ತಾತ್ಕಾಲಿಕವಾಗಿ ಕ್ರಿ.ಶ.ಸು.೧೬೬೦ ಎಂದು ಪರಿಗಣಿಸಿದ್ದಾರೆ.[೫]

### ೨. ಕವಿ ಮಾದಣ್ಣನ ಕಾಲ ವಿಚಾರ

ಕವಿ ಮಾದಣ್ಣ ಚಂಪೂವಿನಲ್ಲಿ "ನನ್ನಯ್ಯನ ಚಾರಿತ್ರ" ಬರೆದಿದ್ದಾನೆ. ಇವನ ಕಾಲವನ್ನು ಕವಿಚರಿತೆಕಾರರು ಸುಮಾರು ೧೬೫೦ರಲ್ಲಿ? ಇದ್ದಿರಬಹುದೆಂದು ತೋರುತ್ತದೆ ಎಂದಿದ್ದಾರೆ. ದ್ವಿತೀಯ ಸಂಪುಟದಲ್ಲಿ. ಈ ಕೃತಿಯನ್ನು ೧೯೭೮ರಲ್ಲಿ ಪ್ರಕಟಿಸಿದ ಶ್ರೀ ಜಿ.ಜಿ.ಮಂಜುನಾಥನ್ ಅವರೂ ಕವಿಯ ಕಾಲದ ಬಗೆಗೆ ಕವಿ ಚರಿತೆಕಾರರ ಕಾಲವನ್ನೇ ಅನುಮೋದಿಸಿದ್ದಾರೆ.

ಗದುಗಿನ ತೋಂಟದಾರ್ಯ ಮಠದ ಹಸ್ತಪ್ರತಿ ಸಂಗ್ರಹಕ್ಕೆ ಇತ್ತೀಚೆಗೆ ಒಲೆಕಟ್ಟೊಂದು ಉಚಿತವಾಗಿ ಬಂದಿದ್ದು, ಅದರಲ್ಲಿ ಕಸ್ತೂರಿ ಸಿದ್ಧನ ಉಪಲಬ್ಧ ಚೋರಕಥೆಯ ಓಲೆ ಪ್ರತಿಯೊಂದು ಶಾಲಿವಾಹನ ಶಕ ವರ್ಷಗಳು ೧೬೯೯ ಖರನಾಮ ಸಂವತ್ಸರ ಮಾಗ ಶು.೩ ಗುರುವಾರದಲು ಪ್ರತಿಯಾಗಿದೆ. ಆರ್.ನರಸಿಂಹಚಾರ್ಯರು ಇವನ ಕಾಲವನ್ನು ೧೮೦೦ ಆಗಿರಬಹುದು ಎಂದರೆ

ಚೋರಕಥೆಯ ಉಪಲಬ್ಧ ಪ್ರತಿಯ ಕಾಲ ೧೭೭೭ಕ್ಕಿಂತ ಹಿಂದೆ ಕಸ್ತೂರಿ ಸಿದ್ಧ ಜೀವಿಸಿದ್ದನೆಂಬುದರಲ್ಲಿ ಸಂಶಯವಿಲ್ಲ. ಅದಕ್ಕಾಗಿ ಇವರ ಕಾಲವನ್ನು ಕ್ರಿ.ಶ.ಸು. ೧೭೫೦ ಎಂದಿದ್ದಾರೆ.[೬]

### ನೇಮರಸ : ಕಾಲವಿಚಾರ

ಡಾ.ಬಿ.ಎಸ್.ಕುಲಕರ್ಣಿ ಅವರಿಂದ ಸಂಪಾದಿತವಾಗಿ ಪ್ರಕಟವಾಗಿರುವ ನೇಮರಸನ 'ಲೋಭದತ್ತ ಚರಿತೆ' ಇದು ಆರ್.ನರಸಿಂಹಚಾರ್ ಗಮನಕ್ಕೆ ಬಾರದ ಕೃತಿಗಳಲ್ಲೊಂದು. ಈ ಕೃತಿ ಸಾಂಗತ್ಯ ಹಾಗೂ

ರಗಳೆಗಳಲ್ಲಿದ್ದು. ಅನ್ನದಾನದ ಮಹಿಮೆಯ ಪ್ರತಿಪಾದನೆ ಇದರ ವಸ್ತು. ನೇಮರಸ ತನ್ನ ಕಾಲದ ಬಗೆಗೆ ಕೃತಿಯಲ್ಲಿ ಏನೂ ಸೂಚಿಸಿಲ್ಲ. ಅಲ್ಲದೆ ಮುಂದಿನ ಕವಿಗಳು ನೇಮರಸನನ್ನು ಹೆಸರಿಸಿದಂತಿಲ್ಲ.

ಡಾ. ಕುಲಕರ್ಣಿ ಅವರು ಈತನ ಕಾಲದ ಬಗೆಗೆ "ನಮಗೆ ದೊರೆತ ತಾಳ ಗ್ರಂಥದ ಹಿನ್ನೆಲೆಯಲ್ಲಿ ಸುಮಾರು ಎರಡುನೂರು ವರುಷಗಳ ಮೊದಲು ಈ ಕವಿ ಬದುಕಿರಬಹುದೆಂದು ತರ್ಕಿಸಬಹುದಾಗಿದೆ" ಎಂದು ಕೃತಿಯ ಮುನ್ನುಡಿ(ಪು.೧೧) ಯಲ್ಲಿ ಹೇಳಿದ್ದಾರೆ.

ನೇಮರಸ 'ಲೋಭದತ್ತ ಚರಿತೆ'ಯ ಪ್ರಥಮಸಂಧಿ ಪದ್ಯ.೨೬ರಲ್ಲಿ ತಾನುಮೊದಲು 'ಸುದರುಸನ ಚರಿತೆ'ಯನ್ನು ರಚಿಸಿರುವುದಾಗಿ ಹೇಳಿದ್ದಾನೆ. ಅದೃಷ್ಟವಶಾತ್ ಈ ಕೃತಿಯ ಓಲೆಯ ಪ್ರತಿಯೊಂದು ಉಪಲಬ್ಧವಿದ್ದು ಮೂಡಬಿದರೆಯ "ಔದರ ಧರ್ಮಸಾಮ್ರಾಜ್ಯ"ದಲ್ಲಿದೆ. ಅದರಲ್ಲಿ ಕವಿ ತಾನು ಸುದರ್ಶನ ಚರಿತೆಯನ್ನು ಶಾಲಿವಾಹನ ಶಕೆ ೧೪೦೬ರಲ್ಲಿ ವಿರಚಿಸಿದಂತೆ ತಿಳಿಸಿರುವನು. ಈ ಕಾರಣದಿಂದ ನೇಮರಸ ೧೫ನೇ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿ ತನ್ನ ಕೃತಿಗಳನ್ನು ರಚಿಸಿದನೆಂಬುದರಲ್ಲಿ ಸಂಶಯವಿಲ್ಲವೆಂದು ತಿಳಿಸಿದ್ದಾನೆ.[೭]

### ಸರ್ವಜ್ಞನ ಕಾಲದ ಬಗೆಗೆ

ಈತನ ಕಾಲದಲ್ಲಿ ಈ ಹಿಂದೆ ಪ್ರಕಟವಾದ ಸರ್ವಜ್ಞನ ಜೀವನ "ದೇಶ-ಕಾಲವಿಚಾರ" ಎಂಬ ಶಿವಣ್ಣನವರ ಲೇಖನದಲ್ಲಿ ಸರ್ವಜ್ಞ ಕ್ರಿ.ಶ.೧೫೦೦ರ ವೇಳೆಯಲ್ಲಿ ಜೀವಿಸಿರಬಹುದೆಂದು ಹೇಳಿದ್ದರು. ಇತ್ತೀಚಿಗೆ ಮೇಲಿನ ಅಭಿಪ್ರಾಯವನ್ನು ಬೆಂಬಲಿಸುವ ಆಧಾರವೊಂದು ಉಪಲಬ್ಧವಾಗಿದ್ದು, ಅದನ್ನು ಈ ಮುಂದೆ ಪ್ರಸ್ತಾಪಿಸಿದ್ದಾರೆ.

ಕ್ರಿ.ಶ.೧೫೫೪ರ ವೇಳೆಗೆ ಸಂಕಲಿತವಾಗಿದ್ದ 'ಮೋಕ್ಷದರ್ಶನ ಮಹಾಸಂಗ್ರಹ'ದಲ್ಲಿ ಪ್ರಭುದೇಶಿಕ "ಪರಮಾರ್ಥ" ಅಂಕಿತದ ಸರ್ವಜ್ಞನ ಪ್ರತಿಯೊಂದನ್ನು ಉಲ್ಲೇಖಿಸಿದ್ದು, ಈ ರೀತಿ ಇದೆ.

ಬೆರಳ ಕೊನೆಯಾರರರಲಿ ವಿಕಳವಾರರ ಸಂಚ
ಕೊರಳನಾಳದಲಿ ಶಿವನಿಪ್ಪಯೋಗದ
ತಿರುಳ ಕಂಡಯ್ಯ ಪರಮಾರ್ಥ

ಈ ತ್ರಿಪದಿ ಕ್ರಿ.ಶ.೧೬೩೬ರಲ್ಲಿ ವೆಂಕನಿಂದ ಪ್ರತಿಯಾದ ಕೃತಿಯಲ್ಲಿ ಕ್ರಮಾಂಕ ೩೧೬ನೆಯದಾಗಿದೆ. ಒಂದೆರೆಡು ಪಾಠಭೇದಗಳಿವೆ.

ಹೀಗಾಗಿ ಸರ್ವಜ್ಞನ ತ್ರಿಪದಿಗೆ "ಪರಮಾರ್ಥ" ಅಂಕಿತದ ಪ್ರಯೋಗ ಕ್ರಿ.ಶ.೧೫೫೪ಕ್ಕಿಂತ ಮೊದಲಿನಿಂದಲೂ ರೂಢಿಯಲ್ಲಿದ್ದ ಸಂಗತಿ ಬೆಳಕಿಗೆ ಬಂದಂತಾಗಿದೆ. ಅಲ್ಲದೆ ಸರ್ವಜ್ಞನ ಕಾಲ ನಿರ್ಣಯದಲ್ಲಿ ಪ್ರಭುದೇವನ ಉಲ್ಲೇಖ ಒಂದು ಗಮನಾರ್ಹ ದಾಖಲೆಯಾಗಿದೆ.[೮]

## ಕೆಲವು ಅಪ್ರಕಟಿತ ವಚನಗಳ ಶೋಧನೆ

### ೧. ಅಂಬಿಗರ ಚೌಡಯ್ಯನ ಅಪ್ರಕಟಿತ ವಚನಗಳು

ಇವರ ವಚನಗಳನ್ನು ಶಿವಣ್ಣನವರು ಬಸವಸಮಿತಿಯ ಸಂಗ್ರಹದ ಓಲೆ ಪ್ರತಿ. ಶ್ರೀ ಜಿ.ಎ.ಶಿವಲಿಂಗಯ್ಯ, ಮೈಸೂರು, ಅವರ ಸಂಗ್ರಹದ ಓಲೆ ಪ್ರತಿ. ಕನ್ನಡ ಅಧ್ಯಯನಕೇಂದ್ರದ ಓಲೆಪ್ರತಿ: ಕೆ.೫೭(ಗ೦ ೪೯) ಇವುಗಳಿಂದ ಸಂಗ್ರಹಿಸಿ ವಚನ ಪತ್ತೆ ಹಚ್ಚಿದ್ದಾರೆ.

ಭವರಹಿತರಿಗೆ ಕರ್ಮಗಳ ಕೇಳಲೇತಕ್ಕೆ?
ಶ್ರೀ ನಷ್ಟವಾದವರಿಗೆ ಕೊಡುವ ಕೊಂಬುದನರಸಲೇತಕ್ಕೆ?
ನೋಡಿದಲ್ಲಿಯೇ ಸಂದಗುಣ
ಮುಟ್ಟಿದಲ್ಲಿಯೆ ಅರ್ಪಿತವೆಂದನಂಬಿಗೆ ಚವುಡಯ್ಯ ೧

ವಸ್ತುವ ಕಾಬರೆಲ್ಲರು
ಆತ್ಮ ಹಲವು ಬಗೆ ಎಂದಡೆ ಹಲವಾದುದುಂಟೆ?
ಒಂದು ಕುಂಭದ ನೀರು ಹಲವು ರಂಧ್ರಗಳ್ಳಲ್ಲಿಳಿವುದು
ಒಂದು ಕುಂಭವ ಭೇದವೊ? ಜಲ ಭೇದವೊ?
ಈ ಉಭಯ ಭೇದವ ತಿಳಿದೆಲ್ಲ ಆತ್ಮನೊಂದೆಯೆಂದನಂಬಿಗ ಚವುಡಯ್ಯ ೨

ಕಾಯ ಜೀವವೆಂಬ ಹೆಚ್ಚು ಕುಂದನದೆಯದೆ
ಜ್ಞಾ.... ನಾ ನೀನೆಂಬ ಭಾವದ ಭ್ರಮೆಯು
ಆರಿಗೆಂದನಂಬಿಗೆ ಚವುಡಯ್ಯ ೩

ಬ್ರಹ್ಮ ಮೊದಲನರೆಯ
ವಿಷ್ಣು ತುದಿಯನರೆಯ
ಎಡಯಣ ಮಾನವರೆತ್ತ ಬಲ್ಲರೋ ಮೃಡನಂತುವ?
ಇತ್ತಣ ಮನದ ವರಿತ್ತಿತ್ತ ಕೇಳಿ
ಅತ್ತಳ ಸುಧಾ ನಿಮಗೇ ತಕ್ಕೆ?
ನಿಸ್ಸಂಗಿ ನಿರೂಪದ ಮಹಾತ್ಮರೆ ಬಲ್ಲಾರೆಂದನಂಬಿಗ ಚವುಡಯ್ಯ ೪

### ನೀಲಮ್ಮನ ಒಂದು ಹೊಸ ವಚನ

ಭಕ್ತಿ ಭಂಡಾರಿ ಬಸವೇಶ್ವರನ ಪತ್ನಿ ನೀಲಮ್ಮ ಕ್ರಿ.ಶ.ಹನ್ನೆರಡನೆಯ ಶತಮಾನದ ಶಿವಶರಣೆಯರಲ್ಲಿ ಒಬ್ಬಳು. ಈಕೆ 'ಕಾಲಜ್ಞಾನ', 'ಪ್ರಸಾದ ಸಂಪಾದನೆ'ಗಳನ್ನು ರಚಿಸಿರುವುದಲ್ಲದೆ ಅನೇಕ ವಚನಗಳನ್ನು ಬರೆದಿದ್ದಾಳೆ.

ಶ್ರೀ.ಸಿ.ಕೆ.ಪರಶುರಾಮಯ್ಯ ಮತ್ತು ಡಾ.ಆರ್.ಸಿ.ಹಿರೇಮಠದ ಪರಿಶ್ರಮದಿಂದ ಈಕೆಯ ೧೨೫ ವಚನಗಳು ಈಗಾಗಲೇ ಪ್ರಕಾಶಿತವಾಗಿದೆ. ಇವರಿಬ್ಬರಿಗೂ ಸಿಗದ ಒಂದು ಹೊಸ ವಚನ ಉಪಲಬ್ಧವಾಗಿದ್ದು ಇದು ಈ ಕೆಳಗಿನಂತಿದೆ.

ಇದು ಕೆ ೧೦೨೨ ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ವಿ.ವಿ., ಹಸ್ತಪ್ರತಿಯಿಂದ ದೊರೆತಿದೆ.

ಮುಟ್ಟಿದ ಮುನ್ನ
ಗುರುವುಂಟ
ಲಿಂಗವುಂಟು
ಜಂಗಮವುಂಟು
ಪಾದೋದಕವುಂಟು
ಪ್ರಸಾದವುಂಟು
ಮುಟ್ಟಿದ ಬಳಿಕ
ಗುರು 'ವಿ'ಲ್ಲ
ಲಿಂಗ 'ವಿ'ಲ್ಲ
ಜಂಗಮ 'ವಿ' ಲ್ಲ
ಪಾದೋದಕ 'ವಿ'ಲ್ಲ
ಪ್ರಸಾದ 'ವಿ'ಲ್ಲ
ಸಂಗಯ್ಯನಲ್ಲಿ
ಸ್ವಯಂ(ವಿ)ಲ್ಲ, ಪರ(ವಿ)ಲ್ಲ[೧೦]

**ಬಸವಣ್ಣನವರ ಒಂದು ಅಪ್ರಕಟಿತ ವಚನ**

ಚಿತ್ರದುರ್ಗ ಬೃಹನ್ಮಠದ ಓಲೆ ೨೧೪(ಗರಿ ೫೩ ೬೦-೫೪) ಇವುಗಳ ಸಹಾಯದಿಂದ ಈ ವಚನ ಪತ್ತೆ ಹಚ್ಚಿದ್ದಾರೆ.

ನೇಹದ ಸುಖವ ನೋಟ ನುಂಗಿತ್ತು.
ನೋಟದ ಸುಖವ ಕೂಟ ನುಂಗಿತ್ತು.
ಕೂಡಿದ ಸುಖವ ಆಲಿಂಗನ ನೂಂಗಿತ್ತು.
ಆಲಿಂಗನದ ಸುಖವ ಸಂಗ ನುಂಗಿತ್ತು.
ಸಂಗದ ಸುಖವ ಪರವಸ ನುಂಗಿತ್ತು.
ಪರವಸದ ಸುಖವ ಕೂಡಲ ಸಂಗಯ್ಯ ತಾನೆ ಬಲ್ಲ.[೧೧]

**ನಿರಾಳಪ್ರಿಯ ಸೊಡ್ಡಳಯ್ಯ ಅಂಕಿತದ ಅಪ್ರಕಟಿತ ವಚನ**

ಪ್ರೊ.ಎಸ್.ಉಮಾಪತಿಯವರು ಶಿವಣ್ಣನವರಿಗೆ ದೊರಕಿಸಿದ ನಾಯಕನಹಟ್ಟಿ ರೇವಣ್ಣನವರ ಓಲೆ ಪ್ರತಿಯಿಂದ ಈ ವಚನ ಬೆಳಕಿಗೆ ತಂದಿದ್ದಾರೆ.

ಸರ್ವಸಂಗ ಪರಿತ್ಯಾಗವ ಮಾಡಿ
ಅರಣ್ಯದಲ್ಲಿದ್ದರೆ ಮೃಗವೆಂಬರು.
ಊರಿಗೆ ಬಂದರೆ ಸಂಸಾರಿ ಎಂಬರು.
ಭೋಗಿಸಿದರೆ ಕಾಮಿ ಎಂಬರು.
ಹೆಣ್ಣ ಬಿಟ್ಟರೆ ಹೊನ್ನಿಲ್ಲ ಎಂಬರು.
ಹೊನ್ನ ಬಿಟ್ಟರೆ ಮಣ್ಣಿಲ್ಲ ಎಂಬರು.
ಪುಣ್ಯವ ಬಿಟ್ಟರೆ ಪೂರ್ವದಕರ್ಮ ಎಂಬರು.
ಮಾತನಾಡದಿದ್ದರೆ ಮೂಗನೆಂಬರು
ಸಹಜವ ನುಡಿದರೆ ಅಂಜುವನೆಂಬುವರು.
ಇದು ಕಾರಣ ನಿರಾಳಪ್ರಿಯ ಸೊಡ್ಡಳಯ್ಯ
ನಿಮ್ಮ ನನ್ನ ಮಚ್ಚು ಜಗಕ್ಕೊಂದಚ್ಚು[೧೨]

**ಸ್ವರ ವಚನಗಳ ಶೋಧನೆ**

**ಚೀಲಾಳೇಶ್ವರ ಅಂಕಿತದ ಸ್ವರವಚನಗಳು**

"ಚೀಲಾಳೇಶ್ವರ" ಅಂಕಿತದ ೧೭೦ ಸ್ವರವಚನಗಳನ್ನುಳ್ಳ ಹಸ್ತಪ್ರತಿಯೊಂದು ಮೈಸೂರಿನ ಶ್ರೀ ಪಿ.ಎಂ.ಗಿರಿರಾಜು ಅವರಿಗೆ ಲಬಿಸಿದೆ. ಅದರಲ್ಲಿ ಎಲ್ಲ ವಚನಗಳಿಗೂ ರಾಗ ನಿರ್ದೇಶನವಿದೆ. ಇಲ್ಲಿನ ೩ ವಚನಗಳ್ಲಲಿ ತೋಂಟದ ಯತಿಗಳನ್ನು ಸ್ತುತಿಸಲಾಗಿದೆ.

ಚಿಲಾಳ ಪ್ರಭುಸ್ವಾಮಿ ಚಿತ್ರದುರ್ಗದ 'ಶೂನ್ಯ ಸಿಂಹಾಸನ' ಪರಂಪರೆಯ ಇಮ್ಮಡಿ ಗುರುಸಿದ್ದನ (ಕ್ರಿ.ಶ.ಸು.೧೬೭೦-೧೭೨೯) ಸಮಕಾಲೀನ ಆದರೆ ಸ್ವರವಚನಗಳ ಕರ್ತೃ ಚಿಲಾಳ ಪ್ರಭುಸ್ವಾಮಿಯಾಗಿರದೆ ಅವನ ಶಿಷ್ಯನೊಬ್ಬನಾಗಿರುವ ಸಾಧ್ಯತೆಯಿದೆ.

ಪ್ರಸ್ತುತದಲ್ಲಿ ಶ್ರೀ ಜಿ.ಎ. ಶಿವಲಿಂಗಯ್ಯ ಮೈಸೂರು ಅವರು ಒದಗಿಸಿದ ಓಲೆ ಪ್ರತಿಯನ್ನು ಆಧರಿಸಿ ಅದರಲ್ಲಿದ್ದ ೨೨ ಸ್ವರವಚನಗಳನ್ನು ಪ್ರಕಟಿಸಿದ್ದಾರೆ.

ಅಖಂಡ ಬ್ರಹ್ಮಾನಂದದ ಬೆಳಗಿನೊಳು ಬೆರೆದ
ಬೆಡಗ ಕಂಡೆ ಕಣ್ಣಿಟ್ಟೆ ಕಾಣಮ್ಮ. ||ಪ||

ಹುಬ್ಬಳ್ಳಿ ಸ್ಥಳದ ಸಂಗಮರ ಪ್ರಣವ ವೃಕ್ಷದ
ಹಬ್ಬಿದ ಲತೆಯ ವಿರಹದ ಮೊಬ್ಬ
ನೆಬ್ಬಿಸಿ ಹೊಳೆವ ರವಿ ಚಂದ್ರ ಶಿಖಿಮಂಡಲದ
ಲಿಬ್ಬರ ಮನಸೊಂದಾಗಿರುವ ಸಂಭ್ರಮದ ಸೊಗಸ ||೧||

ಹೊಳೆಯ ಹೊದ್ದಿದ ನಂದನದ ಕಮಲ ಕುಮುರದ
ಕೊಳೆದ ವಸಂತ ಕಾಲದ
ಬೆಳದಿಂಗಳ ಗರ್ಭದ ಹೊಳೆವ ತಾರಕಜ್ಯೋತಿ
ಕಳೆಯ ಬೆಳಗಿನೊಲ್ ಬೆರೆದು ಬೆಚ್ಚಾದ ||೨||

ತೋಳ ತೆಕ್ಕೆಗಳ ತಿಳಿರಿನ ನೀಲಬಿಂದುವಿನ
ಸಾಲ ದೀವಿಗೆಯ ಬೆಳಕಿನ
ಜಾಳೇಂದ್ರ ಮಂಟಪದ ಸೆಳೆಮಂಚದಲಿರ್ವರು
ಓಲಾಡಿ ಬಾಳುವ ರೀತಿಯ ಚೀಲಾಳ ಸ್ವಾಮಿಯೆ ಬಲ್ಲ[೧]

ಮರಿಶಾಂತಬಸವರಾಜದೇವನ ಒಂದು ಅಪ್ರಕಟಿತ ಸ್ವರವಚನ

ಚಿತ್ರದುರ್ಗದ ೧೮೩(ಗರಿ ೯೪ ಮೂ ಮತ್ತು ಹಿಂ) ದಿಂದ ಪತ್ತೆ ಹಚ್ಚಿದ್ದಾರೆ.

ಹಂಬಲಿಸಿ ಬಡವನಾದೆ ನಲ್ಲೆ ಅತಿ ಚೆಲ್ವ
ರಂಭ ಚಿನ್ನದಬೊಂಬೆ ಮುಖಚಂದ್ರಬಿಂಬೆ ||ಪ||

ಅಕ್ಕರಿಂದಲಿ ಬಂದು ಅತಿರತಿಗೆ ಮನಸಂದು
ಕಕ್ಕಸ ಕುಚದಿಂದಿರಿದು ಕಡು ತವಕ ಮುಂಬರಿದು
ಉಕ್ಕುವ ಕಾತುರದಿಂದ ಸಕ್ಕರೆ ಚಂದುಟಿಸುಧೆಯ
ಗಕ್ಕನಮರ್ದಪ್ಪುತಲಿ ಸವಿದು ಮೋಹ
ಮಿಕ್ಕು ಮಿಗೆ ಮುದ್ದಿಸುವ ಬಗೆಯ ನೆನನೆನೆದು ||೧||

ಮದಗಜದ ನಡೆ ಮಿಗೆಯ ಜಡಿವುತಿಹ ನಿಡುಜಡೆಯ
ಚೆದುರೆ ಚಂಚಲನೇತ್ರೆ ಚಂದನಗಂಧಿ ಸುಬಗಾತ್ರೆ
ಸುದತಿ ಸದ್ಗುಣಾಧಾರೆ ಸೊಬಗು ರತ್ನಾಹಾರೆ
ಬದಿಗೆವೆರೆಪಣೆಯ ಗುಣ ಮಣಿಯೆ ಎ
ನ್ನೆದೆಯ ಮೇಲಾಡುತಿಹ ಮೆಚ್ಚಿನರಗಿಳಿಯೆ ||೨||

ಎಲ್ಲಿ ನೋಡಿದರು ನಿನ್ನಂಥ ಗುಣಗಂಭೀರೆ
ಇಲ್ಲಿ ನೆರೆ ಜಾಣೆ ನಿನ್ನಾಣೆ ನಿನಗೆಣೆಗಾಣೆ

ಪಲ್ಲವಾದರೆ ಬಾರೆ ಎಲ್ಲ ಕಲೆಗಳ ಬೀರೆ
ಫುಲ್ಲಾಶರ ಬಾಧೆಗಾನಾರೆ (ಮ)ಳೆಯ
ಮಲ್ಲೇಶನೆಂದು ಮನ್ನಿಸಿ ನೆರೆಯ ನೀರೆ
ಹಂಬಲಿಸಿ ಬಿಡವಾದೆ(ನ)ಲ್ಲೆ[೧೪]

**ಕೆಲವು ಕೃತಿಗಳ ಕರ್ತೃತ್ವ ವಿಚಾರ ಶೋಧನೆ**

೧. ಇಷ್ಟಲಿಂಗ ರಗಳೆ-ಕರ್ತೃತ್ವ ವಿಚಾರ

ಮೈಸೂರು ವಿಶ್ವವಿದ್ಯಾಲಯದ "ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ" ಐದನೆ ಸಂಪುಟ ಕ್ರಮಾಂಕ ೨೨೫ರಲ್ಲಿ "ಇಷ್ಟಲಿಂಗ ರಗಳೆ" ಎಂಬ ಕೃತಿಯ ಉಲ್ಲೇಖವಿದೆ. ಕರ್ತೃ ಹಾಗೂ ಕಾಲಗಳ ಬಗೆಗೆ ಸೂಚಿಯಲ್ಲಿ ಪ್ರಶ್ನಾರ್ಥಕ ಚಿನ್ಹೆಯಿದೆ.

ಮೇಲಿನ "ಇಷ್ಟಲಿಂಗ ರಗಳೆ" ಪ್ರತ್ಯೇಕ ಕೃತಿಯಲ್ಲ. ಇದು ಮುರಿಗೆ ಶಾಂತವೀರನ 'ಹಮ್ಮೀರ ಕಾವ್ಯ'ದ ೫ನೆಯ ಆಶ್ವಾಸದಲ್ಲಿದೆ. (೫.೧೧ ವಚನದಿಂದ ೧೪) ಹೀಗಾಗಿ "ಇಷ್ಟಲಿಂಗ ರಗಳೆ' ಕರ್ತೃ ಮುರಿಗೆ ಶಾಂತವೀರ ಈತನ ಕಾಲ ಸು.೧೭೦೦ ಎಂದು ಶಿವಣ್ಣನವರು ತಿಳಿಸಿದ್ದಾರೆ.[೧೫]

೨. "ಇಷ್ಟಲಿಂಗ ಚಾರಿತ್ರೆ"ದ ಕರ್ತೃತ್ವ ವಿಚಾರ

ಡಾ.ವಿ.ಶಿವಾನಂದರವರು ತಮ್ಮ ಪ್ರೌಢ ನಿಬಂಧವಾದ "ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ" ಪು.೧೩೦-೧೩೧ರಲ್ಲಿ ಕರಸ್ಥಲದ ವೀರಣ್ಣೊಡೆಯನ 'ಇಷ್ಟಲಿಂಗ ಚರಿತೆ' ಎಂಬ ಕೃತಿಯ ಬಗೆಗೆ ಪ್ರಸ್ತಾಪಿಸಿದ್ದಾರೆ. ಆದರೆ ಅದರ ಅಭಿಪ್ರಾಯ ಸಂಪೂರ್ಣವಾಗಿ ತಪ್ಪಾಗಿದೆ. ಕಾರಣ ಅವರು ಪ್ರಸ್ತಾಪಿಸಿರುವ 'ಇಷ್ಟಲಿಂಗ ಚರಿತ್ರೆ' ಶಂಕರದೇವನದಾಗಿದ್ದು, ಅದರಲ್ಲಿ ೪೭ ವಾರ್ಧಕ ಷಟ್ಪದಿಗಳೀವೆ ಎಂದು ತಿಳಿಸಿದ್ದಾರೆ.[೧೬]

೩. 'ಅನುಪ್ರೇಕ್ಷೆ'ಯ ಕರ್ತೃತ್ವ ವಿಚಾರ

ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾಸಂಶೋಧನಾಲಯದಿಂದ ಪ್ರಕಟವಾದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ" ಪ್ರಥಮ ಸಂಪುಟ ಕ್ರಮಸಂಖ್ಯೆ ೪೭, ಪು.(೪೮-೯) (೧೯೬೨)ರಲ್ಲಿ 'ಅನುಪ್ರೇಕ್ಷೆ) ಎಂಬ ೧೫ ಕಂದಗಳ ಕೃತಯೊಂದರ ಉಲ್ಲೇಖವಿದೆ. ಅಲ್ಲಿ ಕೃತಿಕಾರನ ಹೆಸರು ಹಾಗೂ ಕಾಲ ಪ್ರಶ್ನಾರ್ಥಕ ಚಿಹ್ನೆಯಿದೆ.

ಮೇಲಿನ 'ಅನುಪ್ರೇಕ್ಷೆ' ಶಾಂತರಸನ 'ಯೋಗರತ್ನಾಕರ'ದ ಪ್ರಥಮಾಂಗ ಪದ್ಯಸಂಖ್ಯೆ ೨೪ ರಿಂದ ೩೮ರವರೆಗೆ ದೊರೆಯುತ್ತದೆ. ಆ ಕಾರಣವಾಗಿ ಕೃತಿ ಕರ್ತೃತ್ವ ಶಾಂತರಸನಿಗೆ ಸಲ್ಲುತ್ತದೆ. ಆ ಕಾರಣವಾಗಿ

ಕೃತಿ ಕರ್ತೃತ್ವ ಶಾಂತರಸನಿಗೆ ಸಲ್ಲುತ್ತದೆ. ಓದುಗನೊಬ್ಬ ತನ್ನ ಸೌಲಭ್ಯಕ್ಕಾಗಿ 'ಅನುಪ್ರೇಕ್ಷೆಗಳಿಗೆ' ಸಂಬಂಧಿಸಿದ ಭಾಗವನ್ನು ಬಿಡಿಯಾಗಿ ಬರೆದುಕೊಂಡಿದ್ದಾರೆ.

ಹೀಗಾಗಿ ಸೂಚಿಯಲ್ಲಿನ 'ಅನುಪ್ರಕ್ಷೆ'ಯ ಕರ್ತೃ ಮತ್ತು ಕಾಲಗಳಿಗಿರುವ ಪ್ರಶ್ನಾರ್ಥಕ ಚಿಹ್ನೆಗಳಿಗೆ ಬದಲಾಗಿ ಶಾಂತರಸ ಹಾಗೂ ಸು.೧೬೦೦ ಎಂದು ತಿದ್ದುಪಡಿಯಾಗಬೇಕಿದೆ ಎಂದು ಶಿವಣ್ಣನವರು ತಿಳಿಸಿದ್ದಾರೆ.[೧೨]

ಶಿವಣ್ಣನವರು ಸಂಪಾದಿಸಿರುವ ಕೆಲವು ಪ್ರತಿಗಳು ಅದರ ಅಪೂರ್ವ ವಿದ್ವತ್ತನ್ನು ವ್ಯುತ್ಪತ್ತಿ ಜ್ಞಾನವನ್ನು, ಗ್ರಂಥಸಂಪಾದನಾ ಪ್ರೌಢಿಮೆಯನ್ನು ತೋರಿಸುತ್ತವೆ. ಒಟ್ಟಾರೆ ಈಗಿನ ಆಧುಕ ಕಾಲದಲ್ಲಿ ಗ್ರಂಥಸಂಪಾದನೆಯ ಕಾರ್ಯ ಶುಷ್ಕ ಎಂದು ಮೂಗು ಮುರಿಯುತ್ತಿರುವ ಸಂದರ್ಭದಲ್ಲಿ ಎಸ್. ಶಿವಣ್ಣನವರಂತಹ ಆಸಕ್ತರಿಂದ ಈ ಕ್ಷೇತ್ರ ಇನ್ನೂ ಉಳಿದಿದೆ.

**ಅಡಿಟಿಪ್ಪಣಿಗಳು**

೧. ನಂಜುಂಡಸ್ವಾಮಿ, *ಶ್ರದ್ಧಾಂಜಲಿ,* ಬಸವಪಥ ಮಾಸಪತ್ರಿಕೆ, ಬಸವ ಸಮಿತಿ, ಸೆಪ್ಟೆಂಬರ್, ೨೦೦೯, ಪು.೭೮-೭೯

೨. ನಂಜುಂಡಸ್ವಾಮಿ, *ಬಿಡುಮುತ್ತು ಶ್ರೀ ಎಸ್.ಶಿವಣ್ಣನವರ ಸಂಶೋಧನ ಲೇಖನಗಳ ಸಂಪುಟ ಒಂದು ಪರಿಚಯ,* ದೇಗುಲ ಪ್ರಭೆ ಮಾಸಪತ್ರಿಕೆ, ಜೂನ್ ೨೦೦೮, ಪು.೧೫

೩. ಸದಾನಂದ ಕನವಳ್ಳಿ, ವೀರಣ್ಣ ರಾಜೂರ, ಮಹಾಮಾರ್ಗ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೮, ಪು.೭೮೮, ೭೯೩

೪. ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ ಕೆ., ಸಿರಿಸಂಪದ, ಶಿರೂರ ಅಭಿನಂದನಾ ಸಮಿತಿ, ಯಲಬುರ್ಗಾ, ೨೦೦೨, ಪು.೫೬೭, ೫೭೯

೫. ಶಿವಣ್ಣ ಎಸ್., ಬಿಡುಮುತ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪, ಪು.೧

೬. ಅದೇ, ಪು.೫,೬

೭. ಅದೇ, ಪು.೩೭

೮. ಅದೇ, ಪು.೬೪

೯. ಅದೇ, ಪು.೮೮, ೮೯

೧೦. ಅದೇ, ಪು.೧೧೮

೧೧. ಅದೇ, ಪು.೧೧೯

೧೨. ಅದೇ, ಪು.೧೧೩

೧೩. ಅದೇ, ಪು.೧೯೬

೧೪. ಅದೇ, ಪು.೨೧೬

೧೫. ಅದೇ, ಪು.೩೭೯

೧೬. ಅದೇ, ಪು.೪೦೭

೧೭. ಅದೇ, ಪು.೪೭೨

೩

# ವಚನ ಸಾಹಿತ್ಯದ ಹುಟ್ಟು ಬೆಳವಣಿಗೆ

ಸಾಹಿತ್ಯ ಚರಿತ್ರೆಯಲ್ಲಿಯೇ ವಚನ ಸಾಹಿತ್ಯವೆಂಬುದು ಸಾಮೂಹಿಕ ಕ್ರಾಂತಿಯನ್ನು ಮಾಡಿದ ಸಾಹಿತ್ಯ ರೂಪ. ವಚನವೆನ್ನುವುದು ಜನಸಾಮಾನ್ಯರ ಮಾತಿನಿಂದ ಆರಂಭವಾದ ಇದು ಬರುಬರುತ್ತಾ ಸಾಮಾಜಿಕ ಸುಧಾರಣೆಗೆ ಭದ್ರ ಬುನಾದಿಯಾಯಿತು. ವಚನ ಸಾಹಿತ್ಯದಲ್ಲಿ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮುಂತಾದವರ ಹೆಸರು ಮಾತ್ರ ಪ್ರಸಿದ್ಧಿ ಪಡೆದಿವೆ. ಆದರೆ ಬೆಳಕಿಗೆ ಬಾರದ ಇನ್ನೂ ಅನೇಕ ಜನ ವಚನಕಾರ/ವಚನಕಾರ್ತಿಯರೂ ಇದ್ದಾರೆ ಅಂಥವರನ್ನು ಮತ್ತು ಅವರ ವಚನಗಳನ್ನು ಬೆಳಕಿಗೆತರುವ ಕಾರ್ಯ ಮಾಡಬೇಕಾಗಿದೆ.

ವಚನಗಳನ್ನು ಗದ್ಯ ರೂಪದಲ್ಲಿ ಓದಬಹುದು. ಪದ್ಯ ರೂಪದಲ್ಲಿ ಹಾಡಬಹುದು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕೆಲವು ಕೃತಿಗಳಲ್ಲಿ ಗದ್ಯದ ಜೊತೆ ಪದ್ಯಗಳೂ ಇರುವುದನ್ನು ಕಂಡಿದ್ದೇವೆ. ಅಂದರೆ ಗದ್ಯದ ಜೊತೆಯ ಈ ಪದ್ಯವನ್ನೇ ವಚನ ಎಂದು ಕರೆಯಬಹುದು. ಪದ್ಯವಾದರೆ ಛಂದಸ್ಸಿನ ನಿಯಮವನ್ನು ಹೊಂದಿರಬೇಕಾಗಿರುತ್ತದೆ. ಇಷ್ಟೇ ಸಾಲು, ಇಷ್ಟೇ ಮಾತ್ರೆ, ಮುಂತಾದ ನಿಯಮಗಳನ್ನು ಅನುಸರಿಸಬೇಕು. ಆದರೆ ಈ ವಚನಗಳಿಗೆ ಛಂದಸ್ಸಿನ ಚೌಕಟ್ಟಿಲ್ಲ. ಎಷ್ಟು ಸಾಲು ಬೇಕಾದರೂ ಇರಬಹುದು. ವಚನ ಎಂದರೆ ಸಂಸ್ಕೃತದಲ್ಲಿ 'ಮಾತು' ಎಂದರ್ಥ. ಇವುಗಳು ನಾದ ಪ್ರಧಾನವಾದ್ದರಿಂದ "ಗೀತ" ಎಂದೂ ಸಹ ಕರೆಯುತ್ತಾರೆ. ಉದಾ. "ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ ಮಿತ್ಯವ ನುಡಿವುದೇ ಮರ್ತ್ಯಲೋಕ. 'ಆಚಾರವೇ ಸ್ವರ್ಗ ಅನಾಚಾರವೇ ನರಕ' ಕೂಡಲ ಸಂಗಮದೇವ."

ಮೇಲಿನ ವಚನವನ್ನು ಓದುತ್ತಾ ಹೋದರೆ ಎಂತಹ ದಡ್ಡರಿಗೂ ಸಹ ಅರ್ಥವಾಗುತ್ತದೆ. ಮತ್ತು ನಮ್ಮಲ್ಲಿ ಅದರ ಭಾವನೆಗಳು ಬೆಳೆಯುತ್ತವೆ.

ಆದ್ದರಿಂದ ವಚನಗಳಿಗೆ ಮೂಲವನ್ನು ಹುಡುಕುವಾಗ ಹನ್ನೊಂದು ಹನ್ನೆರಡನೆಯ ಶತಮಾನ ಗಳಿಗಿಂತ ಹಿಂದಿನ ಗದ್ಯದ ಕಡೆ ಗಮನ ಹೋಗುವುದು ತೀರಾ ಸ್ವಾಭಾವಿಕ. ಈ ಸಮಸ್ಯೆಯನ್ನು ಬಗೆಹರಿಸಲು ಇರುವ ದೊಡ್ಡ ತೊಂದರೆಯೆಂದರೆ ಆಧಾರ ಸಾಮಗ್ರಿಗಳ ಅಭಾವ. ಜೇಡರ ದಾಸಿಮಯ್ಯನಿ ಗಿಂತ ಹಿಂದೆ ವಚನಗಳು ಇದ್ದವೇ ಇಲ್ಲವೇ ಎಂದು ಹೇಳುವುದು ತುಂಬಾ ಕಷ್ಟ.

ವಚನಗಳಿಗೆ ಮೂಲ ಯಾವುದು ಎಂಬುದನ್ನು ಹುಡುಕುವ ಪ್ರಯತ್ನಗಳೆಲ್ಲ ಒಂದಲ್ಲ ಒಂದು ವಿಧದಲ್ಲಿ ಹಿಂದೆ ಆಗಲೇ ಸಿದ್ಧವಾಗಿದ್ದ ಪ್ರಕಾರಗಳನ್ನು ಗಮನದಲ್ಲಿಟ್ಟುಕೊಂಡಿವೆ. ಉದಾ : ತಮಿಳಿನ ತೇವಾರಂ, ಸಂಸ್ಕೃತದ ಛಂದೋಗಂಧಿ, ಕನ್ನಡ ತ್ರಿಪದಿ, ಇವುಗಳನ್ನು ಕೈಬಿಟ್ಟು ಅಥವಾ ಕೆಲಕಾಲ ಪಕ್ಕಕ್ಕೆ ತಳ್ಳಿ ವಚನಕಾರರು ಎಂತಹ ಪರಿಸರದಲ್ಲಿ ಯಾರಿಗಾಗಿ ರಚಿಸಿದರು ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸಿದರೆ, ಅಂತಹ ಪ್ರಯತ್ನದಲ್ಲಿ ವಚನ ಸಾಹಿತ್ಯದ ಹುಟ್ಟಿಗೆ ಪರಿಹಾರ ದೊರಕಬಹುದು.

ಒಂದು ರೀತಿಯಿಂದ ನೋಡಿದರೆ ದಂಡಕಕ್ಕೂ ವಚನಕ್ಕೂ ಯಾವುದೇ ಸಂಬಂಧವಿಲ್ಲ. ಏಕೆಂದರೆ ದಂಡಕಗಳು ಗದ್ಯದಂತೆ ಇರುತ್ತವೆ. ಜೊತೆಗೆ ಮಾತ್ರಾಲಯವನ್ನು ಅನುಸರಿಸಿರುತ್ತಾರೆ.

ಈ ವಚನದ ಉಗಮದ ಬಗ್ಗೆ ಬಗೆಹರಿಯಲಾರದಷ್ಟು ಸಮಸ್ಯೆಗಳು ತಲೆ ಎತ್ತಿವೆ. ಕನ್ನಡ ಭಾಷೆಯಲ್ಲಿ ಇವು ಹೇಗೆ ಮೂಡಿಬಂದವು? ಇವುಗಳಿಗೆ ಪ್ರೇರಣೆ ಏನು? ವಚನಕಾರರೇ ಸ್ವತಂತ್ರವಾಗಿ ಕಲ್ಪಿಸಿಕೊಂಡರೆ? ಇವು ಇನ್ನೂ ಸಮಸ್ಯೆಯಾಗಿಯೇ ಉಳಿದಿವೆ.

ಎಲ್.ಬಸವರಾಜು ಅವರು ಸಂಸ್ಕೃತದ ಛಂದೋಗಂಧಗಳಾದ ಗದ್ಯ ಪ್ರಕಾರದ ಸ್ತೋತ್ರಗಳು ವಚನಗಳಿಗೆ ಬಾಹ್ಯ ಮಾದರಿಗಳೆಂದು ಒಮ್ಮೆ ಅಭಿಪ್ರಾಯಪಟ್ಟು ಆಮೇಲೆ ಅದನ್ನು ಸರಿಯಾಗಿಯೇ ಕೈ ಬಿಟ್ಟು ಮುಂದೆ ಕನ್ನಡ ಗದ್ಯಕ್ಕೆ ವೇದ-ಉಪನಿಷತ್ತು-ಬ್ರಾಹ್ಮಣಗಳ ಗದ್ಯ ಸರಣಿಯನ್ನು ಕಸಿಕಟ್ಟಿ ತಮ್ಮ ವಚನ ಪ್ರಕಾರವನ್ನು ನಿಷ್ಪನ್ನ ಮಾಡಿಕೊಂಡರು ಎಂಬ ವಾದವನ್ನು ಮುಂದಿಟ್ಟರು.[೧]

ವಚನಕಾರರು ಕವಿಗಳಲ್ಲ ಅವರು ಬರೆದದ್ದು "ಕಾವ್ಯ"ವಲ್ಲ. ಅವರ ಶೋತೃ ವರ್ಗವು ಕಾವ್ಯಸ್ವಾದನ ಮಾಡುವ ಪಂಡಿತ ವರ್ಗವಲ್ಲ. ಇವರೆಲ್ಲರೂ ಸಾಮಾಜಿಕ ಪ್ರಜ್ಞೆಯುಳ್ಳ ನೀತಿ ಬೋಧಕರು. ತಾವು ಹೇಳಿದ್ದು ಕೇಳುಗರ ಮನಮುಟ್ಟಿ ಅವರ ಮೇಲೆ ಪರಿಣಾಮಬೀರಿ ಸಮಾಜವನ್ನು ತಿದ್ದುವ ಕೆಲಸ ಮಾಡಬೇಕೆಂಬುದೇ ವಚನಕಾರರ ಉದ್ದೇಶ. ಇವು ಭಾವನೆಗೆ ಸಂಬಂಧ ಪಟ್ಟವು ಮತ್ತು ಮಾತಿನ ಭರದಲ್ಲಿ ಹುಟ್ಟಿದುವಾಗಿದ್ದು ಅವುಗಳ ಗಾತ್ರದಲ್ಲಿ ಸಂಕ್ಷಿಪ್ತವಾದವು ಮತ್ತು ಆತ್ಮೀಯ ಸಂಭಾಷಣೆಯ ಲಕ್ಷಣವನ್ನು ಪಡೆದಿವೆ. ವಚನಗಳನ್ನು ಬರೆದವರಾಗಲಿ ಮತ್ತು ಅವುಗಳ ಕೇಳುಗರಾಗಲಿ ಸಾಮಾನ್ಯರಾದ್ದರಿಂದ ಸಾಮಾನ್ಯ ಜನತೆಗೆ ಸಮೀಪವಾದ ಮತ್ತು ಪ್ರಿಯವಾದ ತ್ರಿಪದಿ, ಚೌಪದಿ ಮುಂತಾದ ಪದ್ಯ ಬಂಧಗಳ, ಒಗಟು, ಗಾದೆಗಳ ಪ್ರಭಾವ ಅವುಗಳ ಮೇಲೆ ಆಯಿತು.[೨]

ವಚನಗಳು ಹೇಗೆ ಹುಟ್ಟಿದವು ಎಂಬ ಸಮಸ್ಯೆಯಷ್ಟೇ ಯಾವಾಗ ಹುಟ್ಟಿದವು ಎಂಬುದೂ ಜಟಿಲವಾಗಿದೆ. ಜೇಡರ ದಾಸಿಮಯ್ಯನ ನೂರೈವತ್ತು ವಚನಗಳು ದೊರೆತಿದ್ದು ಅವನೇ ಪ್ರಥಮನಾಗಿರಬೇಕೆಂಬುದು ಹಲವರ ಅಭಿಪ್ರಾಯವಾಗಿದೆ. ವೀರಶೈವ ಕವಿಗಳು ಬಹುಶಃ ಕ್ರಿ.ಶ.೧೧೦೦-೧೦ರವರೆಗೆ ವಚನಗಳನ್ನು ಬರೆಯಲು ಕೈ ಹಾಕಿರಲಿಲ್ಲ. ನಮಗೆ ದೊರಕುವ ಮೊದಲ ವಚನಕಾರ

ಸು.೧೧೪೦ರ ಜೇಡರದಾಸಿಮಯ್ಯ. ಜೇಡರ ದಾಸಿಮಯ್ಯನಲ್ಲಿ ತನಗಿಂತ ಹಿಂದೆ ವಚನಗಳು ರಚಿತವಾಗಿದ್ದವೆಂಬ ಸ್ಪಷ್ಟ ಹೇಳಿಕೆಯೇನೂ ಇಲ್ಲ. "ಸೂಳ್ನುಡಿ" "ನುಡಿಗಡಣ"ದಂತಹ ಮಾತುಗಳಿಂದ ಅವನಿಗಿಂತ ಹಿಂದೆ ವಚನ ರಚನೆಯಾಗುತ್ತಿದ್ದಿರಬಹುದು ಎಂಬ ಊಹೆಯನ್ನು ವಿದ್ವಾಂಸರು ಮಾಡಿದ್ದರು. ಅದಕ್ಕೆ ಇನ್ನು ಪುಷ್ಟಿ ಸಾಲದು. ಬಹುಶಃ ವಚನ ರಚನೆ ಆರಂಭವಾಗಿ ಜೇಡರ ದಾಸಿಮಯ್ಯನ ಹೊತ್ತಿಗೆ ಬಹಳ ಕಾಲವಾಗಿರಲಾರದು. ಅಥವಾ ಅವನಿಂದಲೇ ವಚನ ಪ್ರಕಾರ ಆರಂಭವಾಗಿರಬಹುದು ಎಂದರೆ ಅವನು ಆರ್ಯ ವಚನಕಾರನಿದ್ದರೂ ಇರಬಹುದು. ಇದನ್ನು ಸಂದೇಹದಿಂದ ಹೇಳುವುದು ಅನಿವಾರ್ಯವಾದರೂ ಅವನ ವಚನಗಳಲ್ಲಿ ವಚನ ಸಾಹಿತ್ಯದ ಪ್ರಾರಂಭಿಕ ಲಕ್ಷಣಗಳನ್ನು ನೋಡಬಹುದೆಂಬ ಸಂಗತಿ ಬಹುಶಃ ಖಚಿತವಾದುದು.

## ವಚನ ಸಾಹಿತ್ಯ ಉಗಮ ಮತ್ತು ಬೆಳವಣಿಗೆಗೆ ರಾಜಕೀಯ ಮತ್ತು ಸಾಹಿತ್ಯಕ ಹಿನ್ನೆಲೆ

ಕರ್ನಾಟಕದ ಇತಿಹಾಸದಲ್ಲಿ ಕಲ್ಯಾಣ ಚಾಳುಕ್ಯರ ಕಾಲ. ಒಂದು ಉಜ್ವಲ ಯುಗ. ಅವರಲ್ಲಿ ಅತ್ಯಂತ ಪ್ರಸಿದ್ಧವಾದವರು ಆರನೇ ವಿಕ್ರಮಾದಿತ್ಯ(ಕ್ರಿ.ಶ.೧೦೭೭-೧೧೨೭) ಇವನು ಪಟ್ಟಕ್ಕೆ ಬಂದು ಚಾಳುಕ್ಯ ವಿಕ್ರಮ ಶಕೆ ಆರಂಭಿಸಿದ ಮಹಾ ಪರಾಕ್ರಮಿ. ಉತ್ತರ ಭಾರತದಲ್ಲಿ ಅನೇಕ ರಾಜ್ಯಗಳನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ ಮಹತ್ವಾಕಾಂಕ್ಷಿ.

ವಿಕ್ರಮಾದಿತ್ಯನ ಕಾಲದಲ್ಲಿದ್ದ ಕೊಂಡಗುಳಿ ಕೇಶಿರಾಜ ಕರ್ನಾಟಕದ ಮೊದಲ ವೀರಶೈವ ಕವಿಯೆನ್ನಿಸಿಕೊಂಡಿದ್ದಾನೆ. ಇವನ ನಂತರ ವಿಕ್ರಮಾದಿತ್ಯನ ೧೨ ರಾಣಿಯರಲ್ಲಿ ಒಬ್ಬಳಾದ ಚಂದಲಾ ದೇವಿ 'ನೃತ್ಯ ವಿದ್ಯಾಧರೆ', 'ಅಭಿನವ ಸರಸ್ವತಿ' ಎಂದು ಬಿರುದು ಪಡೆದಿದ್ದಳು. ಇವಳ ಮಗನೇ ೩ನೇ ಸೋಮೇಶ್ವರ. ಇವನ ಕೃತಿ "ಮಾನಸೋಲ್ಲಾಸ".

ಇವನ ಮಗ ಇಮ್ಮಡಿ ಜಗದೇಕ ಮಲ್ಲ(೧೧೩೮-೪೯) ಇವನ ಕಾಲದಲ್ಲೇ ಬಹುಶಃ ಜೇಡರ ದಾಸಿಮಯ್ಯ ಇದ್ದುದು. ಇವನ ಕಾಲಕ್ಕೆ ಸಾಮಂತರಾಗಿದ್ದ ಹೊಯ್ಸಳರು ಪ್ರಬಲರಾದರು. ಇವನ ನಂತರ ೩ನೇ ತೈಲಪ ಬಂದ ಕಲ್ಯಾಣದ ಚಾಲುಕ್ಯರಲ್ಲೆಲ್ಲ ಬಹಳ ದುರದೃಷ್ಟದ್ದು. ಅತ್ಯಂತ ದುರ್ಬಲನಾಗಿದ್ದ ಇವನ ಕಾಲದಲ್ಲಿ ಬಿಜ್ಜಳ ಕ್ರಮೇಣ ಪ್ರಬಲನಾಗುತ್ತಾ ಬಂದು ಕೊನೆಗೆ ಚಕ್ರವರ್ತಿಯನ್ನೇ ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡ.[೬]

ಹೀಗೆ ಬಿಜ್ಜಳ ರಾಜನ ಆಳ್ವಿಕೆಯಲ್ಲಿ ಬಸವಣ್ಣ ಭಂಡಾರಿಯಾಗಿ ಮಂಗಳ ವೇಷೆಯಲ್ಲಿ ಬಿಜ್ಜಳನ ಹತ್ತಿರ ಕೆಲಸಕ್ಕೆ ಸೇರಿದಾಗ ಬಿಜ್ಜಳ ತಾನು ಚಕ್ರವರ್ತಿಯಾಗುವ ಕನಸನ್ನು ಕಾಣುತ್ತಿದ್ದ ಬಲಿಷ್ಠ ಸಾಮಂತನಾಗಿದ್ದ.

ಅಂದಿನ ಕಾಲದಲ್ಲಿ ಶಿವಭಕ್ತನ ಆರಾಧಕರೇ ಬಹಳವಾಗಿ ಬೆಳೆಯುತ್ತಾ ಬಂದರು. ಶಿವನ ಆರಾಧನೆಯೂ ಸ್ಥಾವರ-ಜಂಗಮ-ಲಿಂಗ ಎಂಬುದನ್ನು ಮಾಡಿಕೊಂಡರು. ಸ್ಥಾವರವೆಂದರೆ ದೇವಾಲಯದ ರೂಪವೇ ಸ್ಥಾವರ, ಆರಾಧಿಸುವವನೆ ಜಂಗಮ, ಲಿಂಗದ ಸಂಕ್ಷಿಪ್ತ ಪ್ರತಿಕೃತಿಯ ರೂಪದಲ್ಲಿ ಪೂಜಿಸುವುದೇ ಲಿಂಗವಾಯಿತು. ಯಾವ ಜಾತಿ, ಧರ್ಮ, ವೃತ್ತಿ, ಮಾಡುತ್ತಿದ್ದರೂ ಸಹ ಇದಕ್ಕೆ ನಿಬಂಧನೆಯಿಲ್ಲ ಆಗಾಗಿ ಹಲವಾರು ಜನ ಬಂದು ಸೇರಿಕೊಂಡು ತಮ್ಮ ಹೇಳಿಕೆಯ ರೂಪದ ಮಾತುಗಳೇ ವಚನಗಳಾಗಿ ಮಾರ್ಪಾಡಾದವು.

ದಾಸಿಮಯ್ಯನ ನಂತರ ಬಿಜ್ಜಳ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮುಂತಾದವರು ನೆಲೆಗೊಂಡು ವಚನ ಸಾಹಿತ್ಯವನ್ನು ಉನ್ನತ ಶಿಖರಕ್ಕೆ ಏರಿಸಿದರು.

ಅಂದಿನ ಸಮಾಜದಲ್ಲಿ ಸಾಮಾನ್ಯ ವರ್ಗದ ಜನರನ್ನು ಮತ್ತು ಕೆಳಜಾತಿಯವರನ್ನು ಪುರೋಹಿತರು, ಬ್ರಾಹ್ಮಣರು ಮುಂತಾದ ಮೇಲ್ಪಂಕ್ತಿಯ ಜನ ಶೋಷಣೆ ಮಾಡುತ್ತಿದ್ದರು. ಅದನ್ನು ಕಂಡ ಕೆಲವು ವಚನಕಾರರು ಜಾತಿ ಪದ್ಧತಿ ಅಳಿಯಲು ನೋಡಿದರು. ಅದಕ್ಕೆ ಮೇಲ್ಜಾತಿ ಕೆಳಜಾತಿಯವರ ನಡುವೆ ಸಂಬಂಧ ಬೆಳೆಸುವುದಕ್ಕಾಗಿ ಹೋರಾಡಿದರು. ಅಂತವರಲ್ಲಿ ಬಸವಣ್ಣನವರೇ ಪ್ರಮುಖರು. ಆದರೆ ಅವರ ಆಸೆ ಈಡೇರಲಿಲ್ಲ. ನಂತರ ಜನರ ಮನಸ್ಸನ್ನು ಮಾರ್ಪಡಿಸಲು ವಚನಗಳನ್ನು ರಚಿಸುವುದರ ಮೂಲಕ ಸಮಾಜ ಸುಧಾರಣೆ ಕಾರ್ಯ ಆರಂಭಿಸುವುದರ ಜೊತೆಗೆ ವಚನ ಸಾಹಿತ್ಯವನ್ನು ಬೆಳೆಸಿದರು.

**ವಚನ ಸಾಹಿತ್ಯದ ಬೆಳವಣಿಗೆ**

ವಚನಕಾರರ ಪ್ರಯತ್ನದಿಂದ ಹುಟ್ಟಿದ ಈ ಸಾಹಿತ್ಯವು ಕೆಲವು ಜನ ಪ್ರಮುಖ ವಚನಕಾರ ಸಂಕ್ಷಿಪ್ತ ಇತಿಹಾಸ ತಿಳಿಯುವುದರ ಮೂಲಕ ಈ ರಂಗ ಹೀಗೆ ಬೆಳೆಯುತ್ತಾ ಹೋಯಿತು ಎಂದು ತಿಳಿಯೋಣ.

**ಜೇಡರ ದಾಸಿಮಯ್ಯ (೧೧೩೫-೪೦)**

ಈತ ಗುಲ್ಬರ್ಗ ಜಿಲ್ಲೆಯ ಸುರುಪುರ ತಾಲೂಕಿನ ಮುದೆನೂರಿನವನು. ಮೂಲತಃ ನೇಕಾರ ವೃತ್ತಿಯಿಂದ ಬಂದವ. ಮುದೆನೂರಿನ ದೈವನಾದ ರಾಮನಾಥನ ಭಕ್ತನಾದ್ದರಿಂದ ಅದೇ ಅಂಕಿತವನ್ನು ತನ್ನ ವಚನಗಳಿಗೆ ಬಳಸಿದ್ದಾನೆ. ಈತನನ್ನು ಕೆಲವರು ಸಂಸಾರಿ ಎಂದು ಕೆಲವರು ಸನ್ಯಾಸಿ ಎಂದು ಹೇಳುತ್ತಾರೆ. ಆದರೆ ಅದರ ಬಗ್ಗೆ ಎಲ್ಲಿಯೂ ಸಂಪೂರ್ಣ ಮಾಹಿತಿ ಸಿಕ್ಕಿಲ್ಲ.

ದಾಸಿಮಯ್ಯ ನಮಗೆ ತಿಳಿದ ಮಟ್ಟಿಗೆ ಆರ್ಯ ವಚನಕಾರ. ಈತನ ವಚನಗಳು ಗಾತ್ರದಲ್ಲಿ ತೀರ ಚಿಕ್ಕವು. ಭಾಷೆಯೂ ತೀರ ಸರಳ. ಈ ಗುಣಗಳೇ ಈತನ ಶ್ರೇಷ್ಠತೆಗೆ ಕಾರಣವಾದವು. ಅವುಗಳಲ್ಲಿ ಒಂದನ್ನು ಇಲ್ಲಿ ನೋಡೋಣ.

ಮೊಲೆ-ಮುಡಿ ಬಂದರೆ ಹೆಣ್ಣೆಂಬರು.
ಗಡ್ಡ-ಮೀಸೆ ಬಂದರೆ ಗಂಡೆಂಬರು.
ನಡುವೆ ಸುಳಿವಾತ್ಮನು,
ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ.

ಇಲ್ಲಿ ಗಂಡು ಹೆಣ್ಣುಗಳ ಅಸಮಾನತೆಯ ಬಗ್ಗೆ ದಾಸಿಮಯ್ಯ ತನ್ನ ಕಾಲದ ನಂಬಿಕೆಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾನೆ. ಈತನ ವಚನಗಳು ಓದುತ್ತಿದ್ದಂತೆಯೇ ಎಂತ ಸಾಮಾನ್ಯನಿಗೂ ಅರ್ಥವಾಗುವಷ್ಟು ಸರಳವಾಗಿವೆ.[೪]

## ಬಸವಣ್ಣ

ಹನ್ನೆರಡನೆಯ ಶತಮಾನದ ಅಂದೋಲನದ ನಾಯಕ ಮತ್ತು ಕೇಂದ್ರ ವ್ಯಕ್ತಿಯಾದ ಬಸವಣ್ಣ. ಈತ ಹುಟ್ಟಿದ್ದು ಉತ್ತಮ ಕುಲದಲ್ಲಿಯೇ ಆದರೂ ಸಮಾಜದ ಕೆಳವರ್ಗದವರ ಜೊತೆ ಬೆರೆತು ಅವರಲ್ಲಿ ಒಬ್ಬನಾಗಿ ಜೀವನದುದ್ದಕ್ಕೂ ಹೋರಾಡಿದ ಮಹಾನ್ ಕ್ರಾಂತಿಕಾರಿ.

ಬಸವಣ್ಣ ಹುಟ್ಟಿದ್ದು ಬಿಜಾಪುರ ಜಿಲ್ಲೆಯ ಬಾಗೇವಾಡಿ ಎಂಬ ಅಗ್ರಹಾರದಲ್ಲಿ. ಹನ್ನೆರಡನೆಯ ಶತಮಾನದ ಪ್ರಸಿದ್ಧ ಅಗ್ರಹಾರ. ಈ ಅಗ್ರಹಾರದ ಮುಖ್ಯಸ್ಥನಾಗಿದ್ದ ಶೈವ ಬ್ರಾಹ್ಮಣ 'ಮಾದಿರಾಜ' ಅವನ ತಂದೆ, ತಾಯಿ ಮಾದಲಾಂಬಿಕೆ. ವೈದಿಕ ಸಂಪ್ರದಾಯದಲ್ಲಿ ಬೆಳೆದ ಹುಡುಗನಿಗೆ ವರ್ಗವು ಜಾತಿ ಕುಲ ಭೇದಗಳನ್ನು ಮನ್ನಿಸುವುದಿಲ್ಲ. ಅದು ಭಗವಂತನ ಬಳಿಗೆ ಹೋಗುವ ಒಂದು ರಾಜಮಾರ್ಗ.

ತಂದೆಯ ಒತ್ತಾಯಕ್ಕೆ ಉಪನಯನ ಮಾಡಿಸಿಕೊಂಡು ನಂತರ ತನ್ನ ಹದಿನಾರನೇ ವಯಸ್ಸಿನಲ್ಲಿ ಜನಿವಾರವನ್ನು ಕಿತ್ತೆಸೆದು. ಕೂಡಲ ಸಂಗಮಕ್ಕೆ ಬಂದು ಅಲ್ಲಿಯ 'ಈಶಾನ್ಯ' ಗುರುಗಳ ಹತ್ತಿರ ದೀಕ್ಷೆ ಪಡೆದು ಅಲ್ಲಿ ಇಷ್ಟಲಿಂಗವನ್ನು ಪಡೆದು ಶಿವಭಕ್ತನಾಗಿ ಸಮಾಜ ತಿದ್ದುವ ಕೆಲಸವನ್ನು ಆರಂಭಿಸಿದ. ಆತನ ಕೆಲವು ವಚನಗಳನ್ನು ಈ ಕೆಳಗೆ ನೀಡಲಾಗಿದೆ.

ಉದಾ. ೧ ಅಯ್ಯ ಎಂದರೆ ಸ್ವರ್ಗ
ಎಲವೋ ಎಂದರೆ ನರಕ

ಉದಾ. ೨ ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು

ಉದಾ. ೩ ಉಳ್ಳವರು ಶಿವಾಲಯ ಮಾಡುವರಯ್ಯ
ನಾನೇನ ಮಾಡಲಿ ಬಡವನಾನಯ್ಯ
ಎನ್ನ ದೇಹವೇ ದೇಗುಲ

ಇನ್ನು ಮುಂತಾದ ನೂರಾರು ವಚನಗಳನ್ನು ರಚಿಸುವುದರ ಮೂಲಕ ಜನ ಸಾಮಾನ್ಯರಿಗೆ ಅರ್ಥವಾಗುವಂತೆ ಮಾಡಿ ಸಮಾಜದ ಒರ ಕೋರೆಗಳನ್ನು ತಿದ್ದುತ್ತಾ, ಜಾತಿ ಭೇದವನ್ನು ಹೋಗಲಾಡಿಸಲು ಅಂತರ್ಜಾತಿ ವಿವಾಹವನ್ನು ಮಾಡಿ. ಸಮಾಜದ ಕೆಂಗಣ್ಣಿಗೆ ತುತ್ತಾಗಿ ಕೊನೆಗೆ ಜನರಿಂದಲೇ ನೋವನ್ನು ಅನುಭವಿಸಿ ಕೂಡಲ ಸಂಗಮದಲ್ಲಿ ಐಕ್ಯರಾದರು.*

## ಅಲ್ಲಮಪ್ರಭು

ಅಲ್ಲಮಪ್ರಭು ವೀರಶೈವರಿಗೆ ಗುರು. ಬಸವಣ್ಣ ಮುಂತಾದ ಶರಣರಿಗೆ ಗುರು ಸ್ಥಾನದಲ್ಲಿದ್ದು, ಆ ಇಡೀ ಕಾಲದ ಎಲ್ಲರ ಮೇಲೂ ಒಂದು ಬಗೆಯ ಗಂಭೀರ ಪ್ರಭಾವವನ್ನು ಬೀರಿ, ಆಂದೋಲನದ ನಾಯಕರಿಗೆ ತನ್ನ ನೈತಿಕ ಶೈಲಿಯನ್ನು ಧಾರೆಯೆರೆದ ಕೃತ ಕೃತ್ಯನಾದ ಈತ ನಿಜವಾಗಿಯೂ ಒಬ್ಬ ಮಹಾಪುರುಷ.

ಅಲ್ಲಮನ ಹುಟ್ಟಿದೂರು ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನ ಬಳ್ಳಿಗಾವಿ. ಈತ ಆ ಪಟ್ಟಣದ ದೇವದಾಸಿ ವರ್ಗದವರ ಮುಖ್ಯಸ್ಥನಾಗಿದ್ದ. ಬಹುಶಃ ಅವರ ಮೇಲ್ವಿಚಾರಕನಾಗಿದ್ದ ವ್ಯಕ್ತಿಗೆ ಮಗನಾಗಿ ಜನಿಸಿದ. ಶೂದ್ರ ಕುಲ ಕಲಾವಿದರ ಮನೆಯಲ್ಲಿ ಜನಸಿದ ಅವನು ಮೃದಂಗದ ಕಲೆಯಲ್ಲಿ ನಿಷ್ಣಾತನಾಗಿದ್ದ. ಒಮ್ಮೆ ದೇವಾಲಯದಲ್ಲಿ ಮೃದಂಗ ಬಾರಿಸುವಾಗ ಕಾಮಲತೆ ಎಂಬ ಹೆಣ್ಣು ಇವನನ್ನು ಕಂಡು ಮೋಹಗೊಂಡು ಇವನನ್ನು ವರಿಸಬೇಕು ಎಂದು ವಿವಿಧ ರೀತಿಯಲ್ಲಿ ಬೇಡಿದರೂ ಸಹ ಆತ ಸೋಲದೆ, ಕಲ್ಯಾಣಕ್ಕೆ ಬಂದು "ಗುಹೇಶ್ವರ"ನೆಂಬ ಅಂಕಿತದಿಂದ ವಚನಗಳನ್ನು ರಚಿಸುತ್ತಾ ಸಮಾಜ ಸುಧಾರಣಾ ಕಾರ್ಯವನ್ನು ಕೈಗೊಂಡ.

ಕಲ್ಯಾಣದಲ್ಲಿ ಕೆಲ ಕಾಲವಿದ್ದು, ಅಲ್ಲಿಯ ಶಿವಾನುಭವ ಗೋಷ್ಠಿಗಳಲ್ಲಿ ಕೇಂದ್ರ ವ್ಯಕ್ತಿಯಾಗಿದ್ದು, ಶಿವತತ್ವವನ್ನು ಉಪದೇಶಿಸಿದ ಮತ್ತು ಶೂನ್ಯ ಸಿಂಹಾಸನದ ಅಧ್ಯಕ್ಷನಾದ. ಬಸವಣ್ಣ, ಅಕ್ಕ ಮುಂತಾದವರನ್ನು ಜಗತ್ತಿಗೆ ಪರಿಚಯಿಸಿದ.

ಉದಾ. ೧ ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ.

ಉದಾ. ೨ ಬೆಟ್ಟಕ್ಕೆ ಚಳಿಯಾದರೆ ಏನು ಹೊದಿಸುವಿರಯ್ಯ?
ಬಯಲು ಬತ್ತಲಿಯಿದ್ದರೆ ಏನನುಡಿಸುವಿರಯ್ಯ?
ಭಕ್ತನು ಭವಿಯಾದರೆ ಏನನುಪಮಿಸುವೆನಯ್ಯ ಗುಹೇಶ್ವರ

ಈತನ ವಚನಗಳು ಓದುಗರನ್ನು ಉದಾತ್ತಗೊಳಿಸುತ್ತವೆ. ಅವು ಎಷ್ಟೋ ಸಾರಿ ಅರ್ಥವಾಗುವ ಮುನ್ನ ಅರ್ಥವಾಗಿರುತ್ತವೆ. ಸಾಮಾಜಿಕ ವಿಡಂಬನೆ, ಡಾಂಬಿಕ ಭಕ್ತಿ, ಆತ್ಮ, ಜೀವ ಮುಂತಾದ ವಿಷಯಗಳ ಬಗ್ಗೆ ಬಹಳ ಮಾರ್ಮಿಕವಾಗಿ ವಚನಗಳನ್ನು ರಚಿಸಿದ್ದಾರೆ.[೬]

ಸಿದ್ಧರಾಮ

ಸಿದ್ಧರಾಮ ಆ ಶತಮಾನದ ಅತ್ಯಂತ ಪ್ರಭಾವಶಾಲಿ ವ್ಯಕ್ತಿಗಳಲ್ಲೊಬ್ಬನಾಗಿದ್ದು, ಅವನ ಬೆಂಬಲ ಸಿಕ್ಕು ವೀರಶೈವ ಆಂದೋಳನ ಇನ್ನೂ ಹೆಚ್ಚು ವ್ಯಾಪಕವಾಗಿ ಪ್ರಸಾರವಾಗಲು ಸಹಾಯಕವಾಯಿತು.

ಈತ ಸೊನ್ನಲಿಗೆಯಲ್ಲಿ ಜನಿಸಿದ(ಈಗಿನ ಮಹಾರಾಷ್ಟ್ರದ ಸೊಲ್ಲಾಪುರ). ಅಲ್ಲಿ ಧೂಳಿಮಾಕಾಳ ಎಂಬ ಸ್ಥಳೀಯ ದೇವರ ಭಕ್ತನಾಗಿದ್ದ ಮೊರಡಿಯ ಮುದ್ದ ಮತ್ತು ಸುಗ್ಗಲೆಯರೆಂಬ ಒಕ್ಕಲಿಗ ಗೌಡ ದಂಪತಿಗಳ ಮಗ. ಈತನ ತಾಯಿ ಗರ್ಭವತಿಯಾಗಿದ್ದಾಗ ದೈವ ರೇವಣಸಿದ್ಧ ರಾತ್ರಿ ಕನಸಿನಲ್ಲಿ ಬಂದು ಆಕೆಗೆ ಆಶೀರ್ವಾದ ಮಾಡಿದಾಗ ಈ ಮಗು ಜನಿಸುತ್ತದೆ. ಆಗಾಗಿ ಅದು ಬಾಲ್ಯದ ನಂತರ ತನ್ನ ಮನೆಯನ್ನು ತೊರೆದು ದೈವೀ ಪುರುಷನಾಗಿ ಬೆಳೆದ.

ಶ್ರೀಶೈಲಕ್ಕೆ ತೆರಳಿ ಅಲ್ಲಿನ ಮಲ್ಲಿಕಾರ್ಜುನನನ್ನು ತನ್ನ ಇಷ್ಟದೇವನನ್ನಾಗಿ ಮಾಡಿಕೊಂಡು ಒಂದು ಮಠವನ್ನು ಕಟ್ಟಿ, ತನ್ನ ಭಕ್ತರ ಸಮುದಾಯವನ್ನು ಬೆಳೆಸಿ ಸಮಾಜಕ್ಕೆ ಉತ್ತಮ ಕಾರ್ಯವನ್ನು ಮಾಡಿದ. ಈತ ಸಾವಿರಾರು ವಚನಗಳನ್ನು ರಚಿಸಿದ್ದಾನೆ. ಆದರೆ ಅದರಲ್ಲಿ ೧೩೭೮ ವಚನಗಳು ಮಾತ್ರ ಸಿಕ್ಕಿವೆ. ಅವೆಲ್ಲ ಕಪಿಲಸಿದ್ಧಮಲ್ಲಿಕಾರ್ಜುನ ಎಂಬ ಅಂಕಿತವನ್ನು ಹೊಂದಿವೆ.

ಉದಾ. ೧ ಪಾಲುಂಡ ಬಳಿಕ ಮತ್ತೇನಾನ ಉಂಬರೇ?
ಪಾಲಿಂದ ಇನಿದುಂಟೆ ಎಲೆ ಪರಶಿವಾ?
ಆ ನಿನ್ನ ಕೂಡಿದಾ ಆನಂದ ಸುಖಕೆ ಮ
ತ್ತೇನು ಪ್ರತಿ ಹೇಳುವೆನು ಯೋಗಿನಾಥಾ

ಉದಾ. ೨ ನೀರ ಕ್ಷೀರರ ಸಂದುಳ ಹಂಸ ಬಿಚ್ಚಬಲ್ಲದು, ನೋಡಯ್ಯ
ದೇಹದ ಜೀವದ ಸಂದ ನೀವು ಬಿಚ್ಚಬಲ್ಲರಲ್ಲದೆ
ನಾನೆಲ್ಲ ಬಲ್ಲೆನಯ್ಯಾ?[೭]

ಇಪ್ಪತ್ತನೆಯ ಶತಮಾನದಲ್ಲಿ ನಿಂತು ಕೊನೆಯ ಪಕ್ಷ ಸಾವಿರದ ಇನ್ನೂರು ವರ್ಷಗಳ ಇತಿಹಾಸದ ಕನ್ನಡ ಸಾಹಿತ್ಯವನ್ನು ಒಮ್ಮೆ ಅವಲೋಕಿಸಿದಾಗ, ಇಲ್ಲಿಯ ನೆಲದಿಂದಲೇ ಹುಟ್ಟಿ, ಇಲ್ಲಿಯೇ ಸ್ಫೂರ್ತಿಯನ್ನು ಪಡೆದು ಯಾವ ಹೊರಗಿನ ಪ್ರಭಾವಕ್ಕೆ ಒಳಗಾಗದೆ, ತನ್ನ ರೂಪವನ್ನು ತಾನೇ ಸೃಷ್ಟಿಸಿಕೊಂಡು ಬೆಳೆದು ನಿಂತ ಸಾಹಿತ್ಯ ಪ್ರಕಾರವೆಂದರೆ ಅದು ವಚನ ಸಾಹಿತ್ಯ. ಹೊಸಗನ್ನಡ

ಸಾಹಿತ್ಯವನ್ನು ಕಂಡಾಗ ವಚನಗಳ ವೈಶಿಷ್ಟ್ಯವು ಆಗ ಇನ್ನೂ ಸ್ಫುಟವಾಗುತ್ತದೆ. ವಚನ ಸಾಹಿತ್ಯವು ಇನ್ನೂ ಮಹತ್ವದ್ದಾಗಿ ಪರಿಣಮಿಸುತ್ತದೆ.

ಈ ಶತಮಾನದ ಆರಂಭದಲ್ಲಿ ವಿಶೇಷವಾಗಿ ಫ.ಗು.ಹಳಕಟ್ಟಿಯವರು ಅಪಾರ ಪರಿಶ್ರಮದಿಂದಾಗಿ ತಾಳೆಗರಿಗಳಲ್ಲಿ ಇರುವುದನ್ನು ಒಂದು ಶಿಷ್ಟರೂಪಕ್ಕೆ ತಂದು ಪ್ರಕಟಣೆ ಮಾಡಿದರು. ಕ್ರಿ.ಶ.೧೯೨೦ರ ವೇಳೆ ಅಥವಾ ಅದಕ್ಕೆ ಮುಂಚೆ ವಚನಗಳ ಬಗೆಗೆ ಏನೂ ಗೊತ್ತಿರಲಿಲ್ಲ. ಅವರ ಶ್ರಮದಿಂದ ಪ್ರಕಟಣೆಯಾದ ನಂತರ, ಅವುಗಳ ಮಹತ್ವದ ಕಡೆ ನಾಡಿನ ಜನರ ಗಮನ ಹರಿಯಲು ಅವರ ಪ್ರಕಟಣೆಗಳು ಬಹುಮಟ್ಟಿಗೆ ಕಾರಣವಾದವು.

ಶಿ.ಶಿ.ಬಸವನಾಳ, ಉತ್ತಂಗಿ ಚೆನ್ನಪ್ಪ, ಎಂ.ಆರ್ .ಶ್ರೀನಿವಾಸಮೂರ್ತಿ, ಚೆನ್ನಮಲ್ಲಿಕಾರ್ಜುನ, ಡಿ.ಎಲ್.ನರಸಿಂಹಾಚಾರ್, ಎಸ್.ಸಿ.ನಂದಿಮಠ, ಆರ್.ಆರ್. ದಿವಾಕರ, ಎಸ್.ಎಸ್.ಭೂಸನೂರಮಠ ಮೊದಲಾದ ವಿದ್ವಾಂಸರು ವಚನಗಳು ಸಂಪಾದಿಸಿಯೇ ಕೃತಿಗಳನ್ನೋ ಬರೆದೋ ವಚನ ಸಾಹಿತ್ಯದ ಪ್ರಕಾಶನಕ್ಕೆ ಬಗೆ ಬಗೆಯಾಗಿ ಕಾರಣರಾದರು. ವಚನ ಸಾಹಿತ್ಯದ ಪ್ರಕಾಶನ ಮತ್ತು ಅಧ್ಯಯನಗಳ ಇತಿಹಾಸವನ್ನು ಬರೆಯಲು ಇದು ತಕ್ಕ ಜಾಗವಲ್ಲವಾದರೂ, ಆ ಕ್ಷೇತ್ರದಲ್ಲಿ ಶ್ರಮಿಸಿರುವ ಮತ್ತು ಶ್ರಮಿಸುತ್ತಿರುವ ಮಾನ್ಯರ ಹೆಸರುಗಳನ್ನು ಸ್ಮರಿಸುವುದು ಅಗತ್ಯವಾಗಿದೆ. ಇಪ್ಪತ್ತನೆಯ ಶತಮಾನ ಇನ್ನೊಂದು ಬಗೆಯ ವಚನ ಸಂಕಲನ, ವ್ಯಾಖ್ಯಾನಗಳ ಯುಗವಾಗುತ್ತದೆ. ಆದರೆ ಒಂದು ವ್ಯತ್ಯಾಸ ಇಲ್ಲಿ ಕೆಲಸ ಮಾಡಿರುವವರು ಎಲ್ಲಾ ಮತಗಳಿಗೂ ಸೇರಿದ ಕನ್ನಡ ಸಾಹಿತ್ಯದ ವಿದ್ವಾಂಸರು ಕೇವಲ ವೀರಶೈವರಲ್ಲ.

ಈಗೆಯೇ ವಚನ ಸಾಹಿತ್ಯವು ಮುಂದುವರೆಯುತ್ತಾ ಬಂದಿತು. ಹೊಸ ಯುಗದಲ್ಲಿ ವಚನ ಸಾಹಿತ್ಯಕ್ಕೆ ಮಾರು ಹೋಗಿ ಹೊಸಗನ್ನಡದ ಕವಿಗಳೂ ಕೂಡ ವಚನ ರಚಿಸಿದ್ದಾರೆ. ಬೇಂದ್ರೆಯವರು ಕೆಲವು "ಕರುಳಿನ ವಚನಗಳನ್ನು" ಬರೆದಿದ್ದಾರೆ.

ಪ್ರಾಚೀನರ ವಚನಗಳು ಶುದ್ಧ ಪಾರಮಾರ್ಥಿಕ ಸಾಧನೆಯ ಮಾರ್ಗದೊಳಗಿನವು. ಕರುಳಿನ ವಚನಗಳು ಲೌಕಿಕಭಾವದ ಪ್ರಕಟನೆಗೆ ಬಳಸಿಕೊಂಡಂಥವುಗಳಾಗಿವೆ. ಬೇರೆ ಕವಿಗಳೂ ವಚನ ಶೈಲಿ ಯನ್ನು ಹೊಸಕಾಲಕ್ಕೆ ತಕ್ಕ ಹಾಗೆ ಹೊಸ ರೀತಿಯಲ್ಲಿ ಉಪಯೋಗಿಸಿದ್ದಾರೆ. ಬೇಂದ್ರೆಯವರ ವಚನ ಗಳ ಕೊನೆಗೆ ಅಂಕಿತವಿಲ್ಲ. ಹೊಸಗನ್ನಡ ಕವಿಗಳಲ್ಲಿ ವಚನಗಳನ್ನು ಬರೆಯಲು ಪ್ರಯತ್ನಿಸಿದವರಲ್ಲಿ ಇವರೇ ಬಹುಶಃ ಮೊದಲಿಗರು. ಎಸ್.ವಿ.ರಂಗಣ್ಣನವರು ತದ ನಂತರದವರು. ಇವರ ವಚನಗಳಲ್ಲಿ ಪ್ರಾಚೀನ ವಚನಗಳ ಪ್ರತಿಧ್ವನಿಯನ್ನು ಸ್ಪಷ್ಟವಾಗಿ ಕೇಳಬಹುದಾಗಿದೆ. ಅದಕ್ಕಾಗಿ ಐತಿಹಾಸಿಕವಾಗಿ ರಂಗಣ್ಣನವರನ್ನೇ ಮೊದಲ ಹೊಸಗನ್ನಡದ ವಚನಕಾರರು ಎಂದು ಭಾವಿಸುವುದರಲ್ಲಿ ಔಚಿತ್ಯವಿದೆ. ಇವರ ನಂತರ ತೀ.ನಂ.ಶ್ರೀಯವರು ಮೂರು ಸಾವಿರದ ಐದುನೂರು ವಚನಗಳನ್ನು ಬರೆದಿದ್ದಾರೆ.

ಈ ಆಧುನಿಕ ವಚನಗಳೆಲ್ಲ ಧರ್ಮ, ಆದರ್ಶಗಳ ವಿವೇಚನೆಯಿರುವಂತೆ ಹೊಸ ಜಗತ್ತಿನ ಸಂವೇದನೆ, ಮಿಡಿತ ತುಡಿತಗಳೂ ವ್ಯಕ್ತವಾಗಿವೆ. ಈ ಹೊಸ ವಚನಕಾರರಲ್ಲಿ ಮುಖ್ಯವಾಗಿ ಇಬ್ಬರು ಉಲ್ಲೇಖಾರ್ಹರು. ಒಬ್ಬರು ಎಸ್.ವಿ.ರಂಗಣ್ಣ "ರಂಗಯ್ಯ" ಎಂಬ ಅಂಕಿತದಲ್ಲಿ ಸಾವಿರದ ಎರಡನೂರ ಹನ್ನೆರಡು ವಚನ ರಚಿಸಿದ್ದಾರೆ. ಇನ್ನೊಬ್ಬರು ಎಸ್.ವಿ. ಪರಮೇಶ್ವರಭಟ್ಟರು.[೮]

**ಅಡಿಟಿಪ್ಪಣಿ**

೧. ಡಾ.ಚಿದಾನಂದಮೂರ್ತಿ, ವಚನಸಾಹಿತ್ಯ ಸಂಪುಟ ೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫, ಪು.೫

೨. ಅದೇ, ಪು.೮

೩. ಅದೇ, ಪು.೧೮

೪. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬, ಪು.೪೮

೫. ಮುಗಳಿ ರಂ.ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್‌ಹೌಸ್, ಮೈಸೂರು, ೧೯೫೩, ಪು.೧೫೦

೬. ಚಿದಾನಂದಮೂರ್ತಿ, ವಚನ ಸಾಹಿತ್ಯ ಸಂಪುಟ ೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫, ಪು.೭೪, ೭೯

೭. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬, ಪು.೫೧

೮. ಚಿದಾನಂದಮೂರ್ತಿ, ವಚನಸಾಹಿತ್ಯ, ಸಂಪುಟ ೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫, ಪು.೨೫೨, ೨೫೩

೪

# ಕುಷ್ಟಗಿ ಕರಿಬಸವೇಶ್ವರ ವಚನಗಳು

ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ ಎಂಬ ಅಂಕಿತದಲ್ಲಿನ ವಚನಗಳ ಕರ್ತೃ ಕುಷ್ಟಗಿ ಕರಿಬಸವದೇವ ವಚನ ೯೭ರಲ್ಲಿ ತನ್ನನ್ನು ಕುಷ್ಟಗಿಯ ನಿರ್ವಾಣ ಕರಿಬಸವರಾಜ ದೇವನೆಂದು ಹೇಳಿಕೊಂಡಿದ್ದಾನೆ. ಗುರುಪಟ್ಟು ಕಂಥೆ ಚೆನ್ನಬಸವದೇವ. ಕರಿಬಸವದೇವ ಶರಣರಾಚರಣೆಗೆ ಸಂಬಂಧಿಸಿದಂತೆ ೯೮ ವಚನಗಳನ್ನು ರಚಿಸಿದ್ದಾನೆ. ಕರಿಬಸವನ ಕಾಲ ಸುಮಾರು ೧೭೦೦ ಎಂದು ರೆವೆರೆಂಡ್ ಉತ್ತಂಗಿ ಚನ್ನಪ್ಪನವರ ಅಭಿಪ್ರಾಯ

ಈತನ ವಚನಗಳ ಮೇಲೆ ವಚನಕಾರರಾದ ಬಸವಣ್ಣ, ತೋಂಟದ ಸಿದ್ದಲಿಂಗಯತಿ, ಘನಲಿಂಗಿದೇವ ಮತ್ತು ಸರ್ವಜ್ಞರ ಪ್ರಭಾವ ಬೀರಿದೆ ಎಂಬುದನ್ನು ಚನ್ನಪ್ಪನವರು ತೋರಿಸಿಕೊಟ್ಟಿದ್ದಾರೆ.

ಅಜ್ಞಾತ ಸಂಕಲನಕಾರರ "ಸಂಬಂಧಾಚರಣೆಯ ವಚನಗಳು (ಸಂ.ಪಿ.ಎಂ. ಗಿರಿರಾಜು, ೧೯೮೭) ಕ್ರಮಾಂಕ ೮೭ರಲ್ಲಿ ಅಖಂಡ ಘನಗುರುಲಿಂಗ ಚನ್ನಬಸವೇಶ್ವರ ದೇವ ಸಾಕ್ಷಿಯಾಗಿ ಎಂಬ ಅಂಕಿತದಲ್ಲಿನ "ಪಾದಪೂಜೆ..." ಎಂಬ ವಚನವಿದೆ. ಈ ವಚನ ಕುಷ್ಟಗಿ ಕರಿಬಸವನ ೯೮ ವಚನಗಳಲ್ಲಿಲ್ಲ. ಹೀಗಾಗಿ ಈ ವಚನವನ್ನು ಪ್ರಸ್ತುತ ಕೃತಿಯಲ್ಲಿ ಸೇರ್ಪಡಿಸಿಲ್ಲ.

ಪ್ರಸ್ತುತ ಈ ಕೃತಿಯಲ್ಲಿನ ವಚನಗಳನ್ನು ಶಿವಣ್ಣನವರು ಪ್ರೊ.ಜಿ.ಎಂ. ಉಮಾಪತಿ ಶಾಸ್ತ್ರೀಗಳು ನೀಡಿದ್ದ ಓಲೆ ಕೃತಿಯನ್ನು ಆಧರಿಸಿ ಮತ್ತು "ಲಿಂಗಾಯತ.. ಪತ್ರಿಕೆ"ಯಲ್ಲಿ ಪ್ರಕಟಿಸಿದ ೫೭ ವಚನಗಳ ವಾಠವನ್ನು ಗಮನಿಸಿ ಈ ವಚನಗಳನ್ನು ಸಂಪಾದಿಸಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ಗುರುವೆ ಪರಮೇಶ್ವರನೆಂದು ಭಾವಿಸಬೇಕು ನೋಡಾ. ಎರಡೆಂದು
ಪ್ರಕೃತಿಯ ತೋರಿದರೆ ಅದು ಅಜ್ಞಾನ ನೋಡಾ. ಇದು ಕಾರಣ ಅವನಾನೋರ್ವನು ಎರಡೆಂದು
ಭಾವಿಸಿದಡೆ ಅವನಿಗೆ ಅನೇಕ ಕಾಲ ನರಕದ ಕುಳ್ಳಯೊಳಗೆಯಿಪ್ಪುದು ತಪ್ಪದು ಕಾಣಾ
ಅಖಂಡ ಪರಿಪೂರ್ಣ ಘನಲಿಂಗ ಗುಂಪು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ.[೧]

ಮೇಲಿನ ವಚನದಲ್ಲಿ ಗುರುವಿನ ಮಹತ್ವವನ್ನು ಎತ್ತಿ ತೋರಿಸಿದ್ದಾರೆ. ಗುರುವೇ ದೇವರು ಗುರುವಿಗೂ ದೇವರಿಗೂ ಯಾವ ಭೇದವಿಲ್ಲ ಎಂದು ತಿಳಿಯಬೇಕು. ಅವೆರೆಡು ಬೇರೆ ಎಂದು ನಂಬಿದರೆ ಅದು ಅಜ್ಞಾನ. ಯಾವನು ಅವೆರಡರಲ್ಲಿ ಬೇಧವನ್ನು ಹುಡುಕುತ್ತಾನೆಯೋ ಅವನಿಗೆ ನರಕ ತಪ್ಪದು.

ಸದ್ಗುರುವಿನಲ್ಲಿ ಶಿಷ್ಯತ್ವವನ್ನು ಪಡೆದು ಅವರಿಂದ ಉಪದೇಶವನ್ನು ಪಡೆದ ಬಳಿಕ. ಅವರೇ ನಮಗೆ ಸಕಲ. ಅವರನ್ನು ಬಿಟ್ಟು ನಮ್ಮ ತಂದೆ ತಾಯಿ, ಬಂಧು-ಬಳಗವನ್ನು ನಾವು ನೆನಸಿಕೊಂಡರೆ ಅದು ಶಿವ ದ್ರೋಹ ಮಾಡಿದಂತೆ. ಗುರುವೇ ತಂದೆ ಗುರುವೇ ತಾಯಿ ಎಂಬುವನೇ ನಿಜವಾದ ಶಿಷ್ಯ. ಅವನೇ ನಿಜವಾದ ಭಕ್ತ ಎನ್ನುವುದೇ ಈ ಕೆಳಗಿನ ವಚನದ ಸಾರಾಂಶ.

ಗುರೂಪದೇಶವ ಪಡೆದು ಗುರುಪುತ್ರನೆನಸಿಕೊಂಡು ಬಳಿಕ ಹಿಂದಣ ತಾಯಿ
ತಂದೆ ಬಂಧು-ಬಳಗ ನೆನೆಯದಿರಿರೋ. ಕುಲಗೆಟ್ಟ ಹೊಲೆಯರಿರ ನೆನೆದರೆ
ನಿಮಗೆ ಶಿವದ್ರೋಹ ತಪ್ಪದು. ನಿಮಗೆ ತಂದೆ ತಾಯಿ ಬಂಧು ಬಳಗವ ಹೇಳಿಹೆನು
ಕೇಳಿರೋ. "ಗುರುದೇವೋ ಪರಂನಾಸ್ತಿ" ಯೆಂದುದಾಗಿ ಗುರುವೆ ತಾಯಿ
ಗುರುವೆ ತಂದೆ ಗುರುವೇ ಬಂಧು ಬಳಗವೆಂದು ನಂಬಬಲ್ಲಡೆ ಆತನೆ
ಶಿಷ್ಯನೆಂಬೆ. ಆತನೆ ಭಕ್ತನೆಂಬೆ. ಅಲ್ಲದಿರ್ದಡೆ ಭವಿಯೆಂಬೆ
ಕಾಣಾ ಅಖಂಡ ಪರಿಪೂರ್ಣ ಘನಲಿಂಗ ಗುರುಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ.[೨]

ಸುರತರು ತರುಗಳೊಳಗಲ್ಲ, ಸುರಧೇನುವನು ಪಸುವಿನೊಳಗಲ್ಲ.
ಪರುಷ ಪಾಷಣದೊಳಗಲ್ಲ. ಶಿಷ್ಯನ ಭಾವಕ್ಕೆ ಗುರು ನರನಲ್ಲ.
ನರನೆಂದರೆ ನರಕ ತಪ್ಪದು. ಗುರುವೆ ಪರಶಿವನೆಂದು ಭಾವಿಸಬಲ್ಲಡೆ ಆತನೆ ಶಿಷ್ಯನೆಂಬೆ. ಆತನೆ ಭಕ್ತನೆಂಬೆ. ಅಲ್ಲದಿರ್ದಡೆ ಭವಿಯೆಂಬ ಕಾಣಾ ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ[೩]

ಗುರುವಿನ ಸ್ಥಾನವು ಬಹಳ ವಿಶೇಷವಾದ ಸ್ಥಾನ. ಗುರುವೇ ಪರದೈವ ಎಂದು ನಂಬಬೇಕು. ಇಲ್ಲದಿದ್ದರೆ ಅವನಿಗೆ ನರಕ ಪ್ರಾಪ್ತಿಯಾಗುತ್ತದೆ ಎಂಬುದನ್ನು ಹಲವು ಉಪಮೇಯಗಳ ಮೂಲಕ ತಿಳಿಸುತ್ತಾರೆ.

ದೇವಲೋಕದ ಆಕಳು, ಕಾಮಧೇನು ಇವು ಸಾಮಾನ್ಯ ದನಗಳಂತೆ ಅಲ್ಲ ಅವುಗಳದೇ ಆದ ವಿಶೇಷವಾದ ಸ್ಥಾನವಿದೆ. ಅಮೃತ ವಿಷಕ್ಕೆ ಸಮನಲ್ಲ. ಅದು ಇರುವ ಸ್ಥಾನವೇ ಬೇರೆ. ಹಾಗೆಯೇ ಶಿಷ್ಯನಿಗೆ ಗುರುವು ಒಬ್ಬ ಸಾಮಾನ್ಯ ಮನುಷ್ಯನಲ್ಲ ಒಂದು ವೇಳೆ ಅವರನ್ನು ಕೀಳಾಗಿಕಂಡು, ಅವರು ನಮ್ಮಂತೆ ಮನುಷ್ಯರೇ ಎಂದು ಭಾವಿಸಿದರೆ ಅವರಿಗೆ ನರಕ ಪ್ರಾಪ್ತಿಯಾಗುತ್ತದೆ. ಗುರುವೇ ನಮ್ಮ ದೈವವೆಂದು ನಂಬಿದವನು ಮಾತ್ರ ನಿಜವಾದಶಿಷ್ಯ. ಇಲ್ಲವಾದರೆ ಅವನೊಬ್ಬ ಸಾಮಾನ್ಯ ಮನುಷ್ಯನಾಗುತ್ತಾನೆ.

ಲಿಂಗವನ್ನು ಪ್ರತಿಷ್ಠಾಪನೆ ಮಾಡಿದ ಸ್ಥಳ ಬಹಳ ಪವಿತ್ರವಾದ ಸ್ಥಳ ಅಲ್ಲಿಗೆ ಹೋದರೆ ಸಾಕು ನಮ್ಮ ಪಾಪ ಪರಿಹಾರವಾಗುತ್ತದೆ. ಜಂಗಮನು ಖುಷಿ ಇದ್ದಂತೆ ಅವನನ್ನು ನಾವು ಕೇವಲ ಒಬ್ಬ ಬಿಕ್ಷುಕ ಅಥವಾ ಸಾದು ಎಂದುಕೊಳ್ಳಬಾರದು. ಪರಮ ಪವಿತ್ರವಾದ ಪ್ರಸಾದವನ್ನು ಕೇವಲ ಅದೊಂದು ಅನ್ನ ಅಥವಾ ಅದನ್ನು ದೇವರ ಎಂಜಲು ಎಂದು ತಿಳಿದವರಿಗೆ ನರಕ ಪ್ರಾಪ್ತಿಯಾಗುತ್ತದೆ ಎಂದು ತಿಳಿಸಿದ್ದಾರೆ.

ಲಿಂಗದ ನೆಲೆಯನರಿಯದವಂಗೆ ಜಂಗಮನ ಜಡನೆಂದವಂಗೆ
ಗುರುವ ನರನೆಂದವರಿಗೆ ಪರಮ ಪ್ರಸಾದ ಎಂಜಲೆಂದವರಿಗೆ
ಕುಂಭೀನರಕ ತಪ್ಪದು ಕಾಣಾ ಅಖಂಡ ಪರಿಪೂರ್ಣ ಘುಲಿಂಗ
ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ"

ಮಲಮೂತ್ರದ ಬಿಲದಲ್ಲಿ ಕೆಲಗಯ್ಯನಿಕ್ಕಿ ಮಾಂಸದ ಮೊಟ್ಟೆಯ ಒಲಗೈಯ್ಯೊಳಿಡಿದು
ಎಲುವಿನ ಮೇಲಣ ಚರ್ಮವ ಅಧರ ಮಧುರವೆಂದು
ನಿತ್ಯ ಕಡಿ ತಿಂಬ ಹೊಲೆಯರಿಗೆ ಎಲ್ಲಿಯದೋ, ಶಿವಚಾರ ಕುಲಾಚಾರ?
ಶೀಲ ವ್ರತ ನೇಮ ನಿತ್ಯ ಶಿವ ದ್ರೋಹಿಗೆಲ್ಲಿಯದೋ? ಇಲ್ಲ.
ಅಖಂಡ ಪರಿಪೂರ್ಣ ಘುನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ."

ಪ್ರತಿನಿತ್ಯ ಮಲಮೂತ್ರದ ಜೊತೆ ಸ್ನೇಹಮಾಡಿ, ಮಾಂಸವನ್ನು ಸೇವನೆ ಮಾಡುತ್ತಾ ಪ್ರಾಣಿ ಹಿಂಸೆಯನ್ನು ಮಾಡುವವರು ಅನಾಚಾರಿಗಳು. ಇವರಿಗೆ ದೇವರ ಸಾನಿಧ್ಯ ದೊರಕುವುದಿಲ್ಲ. ಅದೇ ರೀತಿ ಪ್ರತಿನಿತ್ಯ ನೀರಲ್ಲಿಮುಳುಗಿ ಡಾಂಬಚಾರಿಕ ಭಕ್ತನಾಗಿ ದೇವರನ್ನು ಆರಾಧಿಸಿದರೆ ಅವರೂ ಕೂಡ ಅನಾಚಾರಿಗಳೇ.

ಆಚಾರ ವಿಚಾರ ಎಂಬುದು ನಾವು ನಡೆದುಕೊಳ್ಳುವ ವರ್ತನೆಯಲ್ಲಿರುತ್ತದೆಯೇ ವಿನಃ ನಾವು ಆಚರಿಸುವ ಆಚರಣೆಯಿಂದಲ್ಲ, ಹಾಗಾಗಿ ಈ ಮೇಲಿನ ವಚನದಲ್ಲಿ ನಮ್ಮ ಆಚಾರದ ಬಗ್ಗೆ ವಿವರಿಸಿದ್ದಾರೆ.

ಒಬ್ಬ ನಿಜವಾದ ಭಕ್ತನಿಗೆ ಮೂಲ ಪ್ರೇರಣೆಯ ಒಬ್ಬ ದೈವ. ಅವರಿಂದ ಪ್ರೇರಣೆ ಪಡೆದು ಭಕ್ತನಾದ ಮೇಲೆ ನಿತ್ಯ ಕಾಯಕವ ಮಾಡಿ ಸಮಾಜವನ್ನು ತಿದ್ದಿ ಕೆಲಸ ಮಾಡಬೇಕು. ಇಲ್ಲವಾದರೆ ಅವನ ಭಕ್ತಿ ಪ್ರಯೋಜನಕ್ಕೆ ಬಾರದು ಎಂಬುದನ್ನು ಇಲ್ಲಿನ ಕೆಲವು ಉಪಮೆಗಳಿಂದ ತಿಳಿಯಬಹುದು. ಚಿತ್ರದಲ್ಲಿನ ಬೊಂಬೆಯನ್ನು ನೋಡಿ ನಾವು ಅದರ ಕಲ್ಪನೆಯನ್ನು ಮಾಡಿಕೊಳ್ಳಬಹುದೇ ವಿನಃ ಅದರಿಂದ ಏನೂ ಪ್ರಯೋಜನವಿಲ್ಲ. ಏಕೆಂದರೆ ಅದೊಂದು ನಿರ್ಜೀವ ಬೊಂಬೆ. ಕಹಿಗಿಡದ ಹಣ್ಣು ನೋಡಲಿಕ್ಕೆ ಮೃದುವಾಗಿ ವರ್ಣರಂಜಿತವಾಗಿರುತ್ತದೆ. ಆದರೆ ಅದನ್ನು ತಿನ್ನಲು ಬರುವುದಿಲ್ಲ. ಏಕೆಂದರೆ ಅದು ಕಹಿ. ಹತ್ತಿಯ ಹಣ್ಣು ಕೂಡ ನೋಡಲಿಕ್ಕೆ ಕೆಂಪಾಗಿ ಮಾಗಿ ರುಚಿಯಾಗಿರುತ್ತದೆ. ಆದರೆ ಅದರಲ್ಲಿ ಹುಳು ಇರುವುದರಿಂದ ತಿನ್ನಲು ಬರುವುದಿಲ್ಲ. ತಿಪ್ಪೆಗುಂಡಿಯ ನೀರು ನೋಡಲು ಬಹಳ ತಿಳಿಯಾಗಿ ಕಾಣುತ್ತದೆ. ಆದರೆ ಅದನ್ನು ಕುಡಿಯಲು ಬರುವುದಿಲ್ಲ. ಮನೆಯ ಸೇವಕ ಶ್ರೀಮಂತನಾದರೇನು ಅವನಿಂದ ಯಾವ ಸಹಾಯವೂ ಆಗದೆ ಸಮಾಜಕ್ಕೆ ಅವನಿಂದ ಯಾವ ಪ್ರಯೋಜನವೂ ಇಲ್ಲ. ಆಗಾಗಿ ಡಾಂಬಿಕ ಭಕ್ತ ಕತ್ತೆ, ನಾಯಿಗೆ ಸಮ ಎಂದು ಈ ಕೆಳಗಿನ ವಚನದಿಂದ ತಿಳಿಯಬಹುದು.

ಚಿತ್ರದ ಬೊಂಬೆ ರೂಪಾಗಿದ್ದರೇನು? ಚೈತನ್ಯವಿಲ್ಲದ ಕಾರಣ ಪ್ರಯೋಜನವಿಲ್ಲ.
ಹಾವು ಮಕ್ಕೆಯ ಹಣ್ಣು ನುಣ್ಣಾಗಿದ್ದರೇನು? ಕಹಿ ಬಿಡದ ಕಾರಣ ಪ್ರಯೋಜನ
ಕಾರ್ಯವಾದುದಿಲ್ಲ. ಹತ್ತಿಯ ಹಣ್ಣು ಕಳಿತಿದ್ದರೇನು? ಕ್ರಿಮಿ ಬಿಡದ
ಕಾರಣ ಪ್ರಯೋಜನ ಕಾರ್ಯವಾದುದಿಲ್ಲ. ತಿಪ್ಪೆಗುಂಡಿಯ ನೀರು ತಿಳಿದಿದ್ದರೇನು?
ಅಮೇಧ್ಯ ಬೆರೆದ ಕಾರಣ ಪ್ರಯೋಜನ ಕಾರ್ಯವಾದುದಿಲ್ಲ.
ಭಕ್ತನಾದೆನೆಂಬ ಸಂಗತ ತಾಳಿದರೇನು? ತೊತ್ತಿಗೆ ಸಿರಿ ಬಂದರೇನು?
ಹಿತ್ತಲಿಗೆ ತಳೆಯ ಹಿಡಿಸುವಂತೆ ಕರ್ತೃ ಕ್ರೀಯವಿಲ್ಲದವನ ಭಕ್ತಿ ಕತ್ತೆ ನಾಯಂತೆ. ಅವನಿಗೆ
ಸತ್ಯವಿಲ್ಲ ಕಾಣಾ ಅಖಂಡ
ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ[೬]

ಹಂದಿಗೆ ಅಂದಳವನಿಕ್ಕಿದರೆ ಅರಸಾಗಬಲ್ಲುದೆ ಅದು? ಕುನ್ನಿಗೆ ರನ್ನದ ಹಲ್ಲ
ಣವ ಹಾಕಿದರೆ ಕುದುರೆಯಾಗಬಲ್ಲುದೆ ಅದು? ಕನ್ನೆವೆಣ್ಣು ಕಲೆಯ
ಸೂಳೆಯಾಗಬಲ್ಲಳೆ ಅವಳು? ಹೊನ್ನು ಕಬ್ಬುನವಾಗಬಲ್ಲದೆ?
ಭಿನ್ನಣದ ಭಕ್ತಿಯ ಮಾಡಿ ತಪ್ಪುವ ಅನ್ಯಕಾರಿಗಳ ಮುಖವ
ನೋಡಲಾಗದು ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನ ಬಸವೇಶ್ವರ ಶಿವ
ಸಾಕ್ಷಿಯಾಗಿ.[೭]

ಹಂದಿಯನ್ನು ಕರೆದೊಯ್ದು ಪಲ್ಲಕ್ಕಿ ಮೇಲೆ ಕೂರಿಸಿದೊಡನೆಯ ಅದು ಅರಸನಾಗಬಲ್ಲೂದೆ? ನಾಯಿಗೆ ಬಂಗಾರದ ಹಲ್ಲು ಕಟ್ಟಿಸಿದರೆ ಅದು ಕುದುರೆಯಾಗಿ ಬದಲಾಗಬಹುದೆ? ಅದು ಸಾಧ್ಯವಿಲ್ಲ. ಕನ್ಯತ್ವವನ್ನು ಕಳೆದುಕೊಳ್ಳದ ಹೆಣ್ಣು ಎಂದೆಂದಿಗೂ ಸೂಳೆಯಾಗಲು ಸಾಧ್ಯವಿಲ್ಲ. ಬಂಗಾರ ಕಬ್ಬಿಣವಾಗಲು ಸಾಧ್ಯವಿಲ್ಲ ಈ ಮೇಲೆ ನೋಡಿದ ಎಲ್ಲಾ ವಸ್ತುಗಳಿಗೆ ನಾವು ಏನೆಲ್ಲಾ ತಾತ್ಕಾಲಿಕ ಬದಲಾವಣೆ ಮಾಡಿದರೆ ಅವು ತಮ್ಮ ಮೂಲದ ಗುಣವನ್ನು ಬಿಡವು ಹಾಗೆಯೇ ತೋರ್ಪಡಿಕೆಯ ಭಕ್ತ ಕೂಡ ಎಂದೆಂದಿಗೂ ನಿಜವಾದ ಭಕ್ತನಾಗಲು ಸಾಧ್ಯವಿಲ್ಲ ಎಂಬುದನ್ನು ಮೇಲಿನ ಉಪಮೆಗಳ ಮೂಲಕ ತಿಳಿಯಬಹುದು.

**ಸಾರಾಂಶ**

ಭಕ್ತಿಯೆಂಬುದು ತನ್ನಿಂದ ತಾನೇ ಹುಟ್ಟಬೇಕು ಅದು ಪೂಜೆ, ವ್ರತ, ತಾಳ, ಮೇಳಗಳಿಂದ ಹುಟ್ಟಬಾರದು ಹಾಗೆ ಹುಟ್ಟಿದರೆ ಅದು ನಿರ್ಮಲ ಭಕ್ತಿಯಲ್ಲ. ಮಾಳಿಗೆಯ ಮಣ್ಣು ದೇವಾಲಯ ಕಟ್ಟಲಿಕ್ಕೆ ಯೋಗ್ಯವಲ್ಲ. ಆಳು ಎಂದೆಂದಿಗೂ ಅರಸನಾಗಲೂ ಸಾಧ್ಯವಿಲ್ಲ. ಬೈದು ಬುದ್ಧಿಯ ಹೇಳೀದ ಸಾಮಾನ್ಯನಿಗೆ ಮೇಳ ತಾಳಗಳಿಂದ ಭಜನೆ ಮಾಡಿಸಿದರೆ ಅವನಲ್ಲಿ ಭಕ್ತಿ ಹುಟ್ಟಲು ಸಾಧ್ಯವೇ ಇಲ್ಲ ಎಂಬುದೇ ಈ ಕೆಳಗಿನ ವಚನದ ಸಾರಾಂಶ.

ಮಾಳಿಗೆಯ ಮಣ್ಣು ಮಂಟಪಕ್ಕೆ ಸರಿಯೆ? ಆಳಿಂಗೆ ಅರಸು ಸರಿಯೆ?
ಸೂಳೆಗೆ ಪತಿವ್ರತೆ ಸರಿಯೆ? ನಿವಾಳಿಸಿ ಬಿಟ್ಟವೋಳಿಮಾನವರಿಗೆ ಮೇಳವಾಡಿ
ಮುಖರಿದರೆ ಭಕ್ತಿ ಬೆಳುವಿಗೆ ಸರಿಯೆ?. ಅಕ್ಕ ಕೋಗಳಿಗೊಳರ
ಮುಖವ ನೋಡಲಾಗದು ಅಖಂಡ ಪರಿಪೂರ್ಣ ಘನಲಿಂಗ
ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ.[೮]

ಅಂದಿನ ಕಾಲದ ಹನುಮ ಲಂಕೆಯ ಹಾರಿದನೆಂದು ಇಂದಿನ ಕಾಲದ ಕಪಿ
ಕಟ್ಟೆಯ ಹಾರುವಂತೆ ಅರಸುವೆಣ್ಣು ಉಪ್ಪರಿಗೆಯಗೇರಿದಳೆಂದು ತೊತ್ತು
ತಿಪ್ಪೆಯನೇರುವಂತೆ ಕೊಮಾರ ಕುದುರೆಯನೇರಿದನೆಂದು ಕೊಡಗ
ಕುನ್ನಿಯನೇರುವಂತೆ ಆನೆ ಮದ ಸೊಕ್ಕಿ ಸೋಮಬೀದಿಯ ಸೂರೆಯಾಡಿ ತೆಂದು
ಆಡು ಮದ ಸೊಕ್ಕಿ ಬೇಡಗೇರೆಯ ಹೊಕ್ಕು ಕೊರಳ ಮುರಿಸಿಕೊಂಬಂತೆ
ಉರದ ಮೇಲಣನ ಗಂಡನ ಬಿಟ್ಟು ಪರವೂರ ಮಿಂಡನ ಕೊಂಡಾಡುವ
ಮಿಂಡನಾರಿಯಂತೆ ಕಂಡಕಂಡದ ಪೂಜಿಸುವ ಭಂಡ ಮುಂಡೆ ಮೂಕೊರೆಯರ
ಮುಖವ ನೋಡಲಾಗದು ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ.[೯]

ಕಂಡ ಕಂಡ ದೇವರನ್ನು ಪೂಜಿಸಿ ಮುಕ್ತಿ ಸಿಗಲಿಲ್ಲ ಎನ್ನುವುದಕ್ಕಿಂತ, ಒಂದೇ ದೈವವನ್ನು ಆರಾಧಿಸಿ ನಿರ್ಮಲ ಚಿತ್ತದಿಂದ ಧ್ಯಾನಿಸಿದರೆ ನಮಗೆ ಮುಕ್ತಿ ಸಿಕ್ಕೇ ಸಿಗುತ್ತದೆ. ಕಂಡ ಕಂಡ ದೇವರನ್ನು ಪೂಜಿಸುವ ಭಕ್ತರನ್ನು ನನ್ನಿಂದ ನೋಡಲಾಗದು ಎಂದು ಹೇಳುತ್ತಾನೆ. ಒಂದು ವೇಳೆ ಹಾಗೇನಾದರೂ ಆರಾಧಿಸಿದರೆ ಅದು ಅವನ ತಪ್ಪು. ಅದಕ್ಕೆ ಇಲ್ಲಿ ಕೊಟ್ಟಿರುವ ಉಪಮೆಗಳೇ ಸಾಕ್ಷಿ. ಅಂದಿನ ಕಪಿಯು ಲಂಕೆ ಹಾರಿತೆಂದು ಇಂದಿನ ಕಪಿ ಕಟ್ಟೆಯ ಹಾರಿ ನಾನು ಹಾರಿದ್ದು ಲಂಕೆಯೆಂದು ತಿಳಿದುಕೊಂಡರೆ ಅದು ಅದರ ಮೂರ್ಖತನ, ರಾಣಿ ಸಿಂಹಾಸನವನೇರಿದಳೆಂದು ದಾಸಿ ತಿಪ್ಪೆಯನ್ನೇ ಸಿಂಹಾಸನವೆಂದು ತಿಳಿದಂತೆ ಅರಸು ಕುಮಾರ ಕುದುರೆ ಹತ್ತಿದನೆಂದು, ಕೋಡಗ ನಾಯಿಯನ್ನು ಹತ್ತಿದರೆ ಅದು ಅದರ ಮೂರ್ಖತನ, ಆನೆ ಮಧವೇರಿ ಬೀದಿ ತುಂಬಾ ಓಡಾಡುವುದು ಸಹಜ, ಅದೇ ರೀತಿ ಮೇಕೆ ತಾನೂ ಒಂದು ಆನೆ ಎಂದು ತಿಳಿದು ಸೊಕ್ಕಿ ಬೇಡರ ಓಣಿಯಲ್ಲಿ ಹೋದರೆ ಅಲ್ಲಿ ಅದು ತನ್ನ ಕೊರಳ ಮುರಿಸಿಕೊಳ್ಳಬೇಕಾಗುತ್ತದೆ. ಹೀಗೆ ಕಷ್ಟ ಪಡುವುದಕ್ಕಿಂತ ಒಬ್ಬನೇ ದೇವರ ಆರಾಧನೆ ಮಾಡಬೇಕೆಂಬುದೇ ಈ ವಚನದ ಸಾರಾಂಶ.

ನೀರ ಮಡಿಯ ಕಟ್ಟೆ ಬಯಲಿಗೆ ಬಲೆಯ ಬೀಸಬಹುದೆ?
ಏರಿಗೆ ಅರಗ ತೋರಿ ಗಾಳಿಗೆ ಸೊಡರ ಹಿಡಿಯಬಹುದೆ?
ಮರಳ ಗೋಡಿಯನಿಕ್ಕಿ ಮಂಜನ ಮನೆಯ ಕಟ್ಟಿದರೆ ಅದು
ಅಸ್ಥಿರವಾಗುದಲ್ಲದೆ ಸ್ಥಿರವಾಗಬಲ್ಲುದೆ? ಹಲವು ಮುಖ

ದಲ್ಲಿ ಜಿನುಗುವ ಭವಭಾರಿ ಮನುಜರಿಗೆ ಶಿವಾಚಾರ ಅಳವಡದು
ನೋಡಾ ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ[10]

ಮನುಷ್ಯನ ಜೀವನ ಎಂಬುದು ಅಸ್ಥಿರವಾದುದು ಭೂಮಿಯ ಮೇಲೆ ಹುಟ್ಟಿದ ನಾವು ಸ್ಥಿರವಾಗಿ ಉಳೀಯುತ್ತೇವೆಯೋ ಎಂಬ ಭ್ರಮೆಯಲ್ಲಿ ಮುಳುಗಿ ಇಲ್ಲದ ಅನಾಚಾರಗಳನ್ನು ಮಾಡುತ್ತೇವೆ. ಅದನ್ನು ತಪ್ಪಿಸಿ ಸ್ಥಿರವಾಗಿರಬೇಕಾದರೆ ನಾವೇನು ಮಾಡಬೇಕು ಎಂಬುದನ್ನು ಕೆಲವು ಉಪಮೇಗಳ ಮೂಲಕ ತಿಳಿಸುತ್ತಾನೆ. ಬಯಲಿನಲ್ಲಿ ನೀರನ್ನು ನಿಲ್ಲಿಸಿ ಆ ಬಯಲಿಗೆ ಬಲೆಯನ್ನು ಬೀಸಿ ಮೀನು ಹಿಡಿಯಲು ಸಾಧ್ಯವೇ? ಅದೆಂದಿಗೂ ಆಗದ ಕೆಲಸ. ದಿನ್ನೆಯ ಮೇಲೆ ನಿಂತು ಕೆಂಡವನ್ನು ತೂರಿ ಆ ಗಾಳಿಗೆ ಸೊಡರು ಹಿಡಿಯಬಹುದೇ ಅದೂ ಕೂಡ ಆಗದ ಕೆಲಸ. ಮರಳ ಗೋಡೆಯ ಕಟ್ಟಿ ಮಂಜಿನ ಮನೆಯ ಕಟ್ಟಿದರೆ ಅದು ನಿಲ್ಲಬಲ್ಲದೆ. ಹೀಗೆ ಬೇರೆ ಬೇರೆ ಜನ್ಮದಲ್ಲಿ ಹುಟ್ಟುವ ಮನುಷ್ಯನಿಗೆ ಶಿವಚಾರ ಸಿಗುವುದೇ ಎಂದು ತಿಳಿಸಿದ್ದಾರೆ.

**ಸಾರಾಂಶ**

ಮನದಲ್ಲಿ ಆಸೆಯನ್ನು ತುಂಬಿಕೊಂಡ ಸಾಮಾನ್ಯ ಮನುಷ್ಯನಿಗೆ ನಾವು ಶಿವಾಚಾರ ಶಿವಭಕ್ತಿಯ ಬಗ್ಗೆ ಉಪದೇಶವ ಮಾಡಿದರೆ ಅವನು ನಿಜವಾದ ಶಿವಭಕ್ತನಾಗಲಾರ. ಏಕೆಂದರೆ ನಾನು ಭಕ್ತನಾಗಬೇಕೆಂಬ ಹಂಬಲ ಅವನ ಮನದಲ್ಲಿಯೇ ಹುಟ್ಟಿ ಸದಾಕಾಲ ಶಿವಧ್ಯಾನದಲ್ಲಿ ಕುಳಿತರೆ ಮಾತ್ರ ಅವನು ನಿಜವಾದ ಶಿವಭಕ್ತನಾಗಲು ಸಾಧ್ಯ. ಇಲ್ಲದೇ ಹೋದರೆ ನಾವು ಬಲವಂತದಿಂದ ಭಕ್ತನ ಮಾಡಲು ಸಾಧ್ಯವಿಲ್ಲ ಎಂಬುದನ್ನು ಕೆಳಗಿನ ನಿದರ್ಶನದಿಂದ ತಿಳಿಯಬಲ್ಲದು. ಒಣಗಿದ ಮರದ ತುಂಡಿಗೆ ನೀರಾಕಿದರೆ ಅದು ಚಿಗರ ಬಲ್ಲದೆ? ಬಂಜೆ ತಾಯಿಯಾಗಬಲ್ಲಳೆ? ಕಣ್ಣುಕಾನದ ಕುರುಡನಿಗೆ ಕನ್ನಡ ತೋರಿಸಿದರೆ ಅದರಲ್ಲಿ ಅವನು ತನ್ನ ರೂಪವನ್ನು ನೋಡಿಕೊಳ್ಳಲು ಸಾಧ್ಯವೇ ಇಲ್ಲ.

ಮಾತುಬಾರದ ಮೂಕನಿಗೆ ಒಂದು ವೇಳೆ ರಾಗದ ಜ್ಞಾನ ಇದ್ದರೂ ಕೂಡ, ಅವನಿಂದ ಆ ರಾಗ ಹಾಡಲು ಸಾಧ್ಯವಿಲ್ಲ. ಹುಚ್ಚನಿಗೆ ಬುದ್ಧಿಯ ಪರಿವೇ ಇರಲು ಸಾಧ್ಯವಿಲ್ಲ. ಈ ಮೇಲಿನ ಎಲ್ಲವೂ ಹೇಗೆ ಸಾಧ್ಯವಿಲ್ಲವೋ ಹಾಗೆ ನಿಜವಾದ ಭಕ್ತನಾಗದಿದ್ದರೆ ಅವನಿಗೆ ಮುಕ್ತಿ ಸಿಗುವುದಿಲ್ಲ ಎಂಬುದೇ ಇದರ ತಾತ್ಪರ್ಯ.

ಕೊರಡು ಕೊನರಬಲ್ಲುದೆ? ಬರಡು ಹಯನಾಗಬಲ್ಲುದೆ? ಕುರುಡಗೆ
ಕನ್ನಡಿಯ ತೋರಿಸಿದರೆ ನೋಡಬಲ್ಲನೆ? ಮೂಕರಿಗೆ ರಾಗವು
ಹೊಳೆದರೆ ಹಾಡಬಲ್ಲನೆ? ಹೇಗೆ ಬುದ್ಧಿಯ ಬಲ್ಲನೆ?
ಲೋಗರಿಗೆ ಉಪದೇಶವ ಕೊಟ್ಟರೆ ಶಿವಭಕ್ತರಾಗಬಲ್ಲಾದೆ? ಶಿವಸತ್ವದ

ಸಂಪನ್ನರಾಗಲ್ಲಾರೆ ಶಿವಚಾರ ಅಳವಡಿದು ನೋಡಾ ಅಖಂಡ
ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ[೨೦]

ಕೆರೆಯೊಡೆದ ಬಳಿಕ ತುಂಬು ತಡೆಯಬಲ್ಲದೆ? ಒಡಕ ಮಡಕೆಗೆ ಒತ್ತಿ
ಮಣ್ಣಕೊಟ್ಟರೆ ನಿಲ್ಲಬಲ್ಲುದೆ? ಮುತ್ತೊಡದರೆ ಬೆಚ್ಚಬಲ್ಲದೆ.
ಚಿತ್ತ ಒಡೆದರೆ ಭಕ್ತಿ ಬೀಸರವಲ್ಲದೆ ಮುಕ್ತಿಯೆಲ್ಲಿಯದೊ?
ಕತ್ತೆಯ ಸೂಳೆಯ ಮಕ್ಕಳಿರಾ ಸತ್ತ ಹಾಗೆ ಸುಮ್ಮಗಿರಿರೊ ಅಖಂಡ
ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ.[೨೧]

ಏಕಚಿತ್ತದಿಂದ ದೇವರನ್ನು ಧ್ಯಾನಿಸಿದರೆ ಮಾತ್ರ ಅವನಿಗೆ ಮುಕ್ತಿಸಿಗುತ್ತದೆ. ದೇವರ ಸಾನಿಧ್ಯದಲ್ಲಿನಿಂತು ಒಂದೇ ಮನಸ್ಸಿನಿಂದ ದೇವರನ್ನು ಭಜಿಸಬೇಕು ಅದನ್ನು ಮಾಡದೆ ಬೇರೆ ಯಾವುದೋ ಮನಸ್ಸಿನಲ್ಲಿ ನೆನೆದರೆ ಅಂತವರಿಗೆ ಮುಕ್ತಿ ಸಿಗದು ಎಂಬುದನ್ನು ಈ ಕೆಳಗಿನ ಉಪಮೆಗಳಿಂದ ತಿಳಿಯಬಹುದು. ಕೆರೆಯು ತುಂಬಿ ಒಡೆದಾಗ ಅದನ್ನು ನೀರುಬಿಡುವ ದ್ವಾರ ತುಂಬು ತಡೆಯಲು ಸಾಧ್ಯವಿಲ್ಲ. ಮಣ್ಣಿನ ಮಡಕೆ ಒಡೆದು ನೀರು ಸೋರುವಾಗ ಅದಕ್ಕೆ ಮಣ್ಣು ಒತ್ತುವುದರಿಂದ ಸೋರುವುದನ್ನು ತಡೆಯಲು ಸಾಧ್ಯವಿಲ್ಲ. ಮೂಲರೂಪದ ಮುತ್ತು ಒಡೆದರೆ ಮತ್ತೆ ಅದನ್ನು ಅಂಟಿಸಿ ಮೂಲರೂಪಕ್ಕೆ ತರಲು ಸಾಧ್ಯವಿಲ್ಲ. ಎಂಬುದೇ ಮೇಲಿನ ವಚನದ ತಾತ್ಪರ್ಯ.

**ಸಾರಾಂಶ**

ನಾವು ಶೀಲವಂತರಾಗುವುದು ಬರೀ ಬಾಹ್ಯದ ಆಡಂಬರ ಮಾಡುವುದರಿಂದಲ್ಲ ತನು ಮನ ಶುದ್ಧಿಗೊಳಿಸಿಕೊಂಡಾಗ ಮಾತ್ರ. ಪ್ರಕೃತಿಯಲ್ಲಿ ಸಹಜವಾಗಿ ಅರಿಯುವ ನೀರನ್ನು ಬಟ್ಟೆಯ ಕಟ್ಟೆ ಸೊಸಿ ತಂದರೆ ಅದು ಶೀಲವಂತಿಕೆಯಲ್ಲ. ಬೆಂಕಿಯ ಜ್ವಾಲೆಯಂತೆ ಹರಿವ ನಮ್ಮ ಮನಸ್ಸನ್ನು ಕಟ್ಟಿ ಹಾಕುವುದೇ ಶೀಲ. ಬಣ್ಣ ಬಣ್ಣದ ಹೆಣ್ಣುಗಳನ್ನು ಕಂಡಾಗ ನಮ್ಮ ಮನಸ್ಸು ಚಂಚಲಗೊಳ್ಳುವುದು ಸಹಜ ಆದರೆ ಹಾಗೆ ಚಂಚಲನಾಗದೇ ಇರುವುದೇ ಶೀಲ. ನಮ್ಮ ಮನಸ್ಸಿನ ಕಾಮ, ಕ್ರೋಧ, ಲೋಭಾ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗಗಳನ್ನು ಗೆದ್ದವನೇ ನಿಜವಾದ ಶೀಲವಂತ ಎನ್ನುವುದು ಈ ಕೆಳಗಿನ ವಚನದ ಸಾರಾಂಶ.

ಶೀಲ ಶೀಲವೆಂದೇನೊ? ಶೀಲದಂಥಾ ಸೂಲವೆ? ಸುದ್ದ ಹರಿವ ನೀರನು
ನೂಲರಿವೆ ಸುತ್ತಿಯದ ಕಟ್ಟಿ ತಂದದ್ದು ಶೀಲವೆ? ಅದಲ್ಲ ನಿಲ್ಲು ಮಾಣು
ಜ್ವಾಲೆಯಂದದಿ ಹರಿವ ಮನವನು ಖತಿ ಹೋಗದ ಹಾಗೆ ಕಟ್ಟಿ ನಿಲ್ಲಿಸಿ
ದುದೆ ಶೀಲ. ಬಾಲೆಯರ ಬಣ್ಣದ ಬಗೆಗೆ ಭ್ರಮೆಗೊಳ್ಳದುರೆ ಶೀಲ.

ಕಾಲ ಕರ್ಮಗಳ ಗೆದ್ದುದೆ ಶೀಲ. ಇಂತಲ್ಲದೆ ಉಳಿದುದೆಲ್ಲ

ದುಃಶ್ಶೀಲ ಕಾಣಾ ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ[೧೬]

ಉದಯಲೆದ್ದು ಗಡಗಡನೆ ನಡುಗುತ ಹೋಗಿ ಹೂ ಗಿಡ ಪತ್ರೆಯ ಕಡಿವ

ದೃಢ ಗೇಡಿಗಳು ನೀವು ಕೇಳೀರೊ, ಅದು ಕಡು ಪಾಪವಲ್ಲವೆ ನಿಮಗೆ?

ನಡುಗಿರೊ ಪರಧನ ಪರಸ್ತ್ರೀಯರಿಗೆ, ನಡುಗಿರೊ ಕೊಲೆಹುಸಿ ಕಳವು

ಪಾರದ್ವಾರ ಅತಿಕಾಂಕ್ಷಕ್ಕೆ ನಡುಗಿರೊ ಹರನಿಂದ್ಯ ಗುರುನಿಂದ್ಯ ಅನಾಚಾರಕ್ಕೆ

ಇದಕ್ಕೆ ನಡುಗದೆ ಮಳೆ ಛಳಿ ಗಾಳಿಗೆ ನಡುಗಿ ಹೂ ಗಿಡ ಪತ್ರಿಯ

ಕಡಿವ ಕಡುಪಾಪಿಗಳಿಗೆ ನಿಮಗೆ ಮೃಡ ಪೂಜೆಯೆಲ್ಲದೋ? ಇಲ್ಲ,

ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ.[೧೭]

ಪೂಜೆಯೆಂದರೆ ಬೆಳಗಿನ ಜಾವ ಎದ್ದು ತಣ್ಣೀರಲ್ಲಿ ಸ್ನಾನ ಮಾಡಿ, ಹೂ ಪತ್ರಿ ತಂದು, ವಿಭೂತಿ ಬಳಿದುಕೊಂಡು ಆರಾಧಿಸುವುದು ಪೂಜೆಯಲ್ಲ. ನಿಜವಾದ ಪೂಜೆಯೆಂದರೆ ಪರರ ಹಣ ಪರಸ್ತ್ರೀಯರ ಬಗ್ಗೆ ಮೋಹಗೊಳ್ಳದಿರುವುದೇ ಪೂಜೆ, ಕೊಲೆ, ಸುಲಿಗೆ ಸುಳ್ಳು ಇದನ್ನು ಖಂಡಿಸುವುದನ್ನು ಪೂಜೆ ಹರನಿಂದೆ, ಗುರುಗಿಂದೆ, ಅನಾಚಾರವನ್ನು ಮಾಡದಿರುವುದೇ ಪೂಜೆ. ಇಂತವುಗಳನ್ನು ಮಾಡದೆ ಡಾಂಬಿಕ ಪೂಜೆಯನ್ನು ಬಿಟ್ಟು ತುಂಬು ಮನಸ್ಸಿನಿಂದ ಪೂಜಿಸುವುದೇ ಮೃಢ ಪೂಜೆ ಎಂಬುದೇ ಈ ಮೇಲಿನ ವಚನದ ತಾತ್ಪರ್ಯ.

ಇದ್ದೂರೊಳಗೆ ಗುರುವಿದ್ದು ಬುದ್ಧಿಯ ಕೇಳದೆ ಕದ್ದಕಳ್ಳನಂತೆ ಕಂಡ ಕಡೆಯಲ್ಲಿ

ತಿರುಗುವ ಉದ್ರೇಕ ಹೊಲೆಯರ ಮುಖದ ನೋಡಲಾಗದು ಅಖಂಡ

ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ[೧೮]

'ಅಂಗೈಯಲ್ಲಿ ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಊರೆಲ್ಲಾ ಸುತ್ತಾಡಿದರು'' ಎನ್ನುವ ಗಾದೆ ಮಾತಿನಂತೆ ನಮ್ಮ ಸ್ವಂತ ಸ್ಥಳದಲ್ಲಿರುವ ಗುರುವಿನಿಂದ ಜ್ಞಾನವನ್ನು ಪಡೆಯದೆ ಇನ್ನೂ ಒಳ್ಳೆಯ ಗುರು ಬೇಕು ಎಂದು ಕಂಡ ಕಂಡವರಲ್ಲಿ ಸುತ್ತಾಡುತ್ತಾ ಹೋದರೆ ಅವನಿಗೆ ಜ್ಞಾನ ಲಭಿಸದು. ಅವನು ಎಂದಿಗೂ ಕೂಡ ಪರಿಪೂರ್ಣನಾಗಲಾರನೆಂಬುದೇ ಈ ಮೇಲಿನ ವಚನದ ತಾತ್ಪರ್ಯ

ಒಂದು ಮನೆಯೊಳಗೆ ಗಂಡಗೊಬ್ಬಗುರು. ಹೆಂಡತಿಗೊಬ್ಬಗುರು. ಮಕ್ಕಳಿಗೊಬ್ಬಗುರು.
ತಂದೆಗೊಬ್ಬಗುರು. ತಾಯಿಗೊಬ್ಬಗುರು. ಈ ರೀತಿಯಲ್ಲಿ ಗುರುಭೇದವ

ಮಾಡಿಕೊಂಡು ನಾವು ಭಕ್ತರುಯೆಂದು ಬೆರವರು. ಇಂಥ ನೀಚ

ಹೊಲೆಯರಿಗೆ ಭಕ್ತಿ ಮುಕ್ತಿಯೆಲ್ಲದೊ? ಏಕೋ ಗುರುವೊಬ್ಬನಲ್ಲದೆ ಎರಡುಂಟೆ? ಇದಲ್ಲದೆ
ಗುರುಭೇದವ ಮಾಡಿದ ಹೊಲೆಯರ

ಮುಖವ ನೋಡಲಾಗದು ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವ
ಸಾಕ್ಷಿಯಾಗಿ[೧೬]

ನಾವು ಯಾವುದೇ ಕಾಯಕವನ್ನು ಮಾಡಲಿ ಇಡಿದ ಕಾಯಕವನ್ನು ಬಿಡದೆ ಸತತ ಪ್ರಯತ್ನದಿಂದ ಮಾಡಿದಾಗ ಮಾತ್ರ ಆ ಕಾಯಕ ಮುಗಿಯುತ್ತದೆ. ಹಾಗೆ ಮಾಡದೆ ಹಿಡಿದ ಕಾಯಕವನ್ನು ಅರ್ಧಕ್ಕೆ ನಿಲ್ಲಿಸಿ ಬೇರೆ ಕಾಯಕ ಆರಂಭಿಸಿದರೆ ಎರಡೂ ಪೂರ್ಣಗೊಳ್ಳುವುದಿಲ್ಲ ಹಾಗೆ. ಒಬ್ಬನೇ ಗುರುವೆಂದು ಭಾವಿಸಿ ಅವರಲ್ಲಿ ಗೌರವ ವಿಧೇಯತೆಯಿಂದ ವಿಧ್ಯೆಯನ್ನು ಕಲಿತಾಗ ಮಾತ್ರ ನಾವು ಯಶಸ್ಸು ಪಡೆಯಲು ಸಾಧ್ಯ ಇಲ್ಲವಾದರೆ ಯಶಸ್ಸು ದೊರೆಯದು. ಅದರಂತೆ, ಮನೆಯಲ್ಲಿರುವ ಅಣ್ಣ ತಮ್ಮ, ತಂದೆ ತಾಯಿ ಇವರಿಗೆಲ್ಲ ಒಬ್ಬನೆ ಗುರುವೆಂದು ಭಾವಿಸಿ ಯಾವುದೇ ಗುರು ಭೇದ ಮಾಡದೆ ಕಲಿಯಬೇಕು. ಹಾಗೆ ಬೇಧ ಮಾಡಿದವರ ಮುಖವ ನೋಡಲಾಗದು ಎಂದು ತಿಳಿಸುವುದೇ ಈ ವಚನದ ಸಾರಾಂಶ.

ಶಿವ ಭಕ್ತಗೆ ಭವಿ ಸರಿಯೆಂಬ ಭ್ರಷ್ಟ ಬಂಡರು ನೀವು ಕೇಳಿರೊ, ಅದೇನು
ಕಾರಣವೆಂದರೆ ಕತ್ತೆಗೆ ಕುದುರೆ ಸರಿಯೆ? ಗರತಿಗೆ ತೊತ್ತು ಸರಿಯೇ?
ಭಿತ್ತಿಗೆ ಕೇರು ಸರಿಯೆ? ವಿರಕ್ತಿ ಪಿಂತಿ ಸರಿಯೆ?
ಕತ್ತಲಿಗೆ ಬೆಳಗು ಸರಿಯೆ? ಕರ್ತಗೆ ಭೃತ್ಯ ಸರಿಯೆಂಬ ದುರುಕ್ತಿಯ ದುರಾಚರಿಯ
ದೂಷಕ ಹೊಲೆಯರಿಗೆ ಭಕ್ತಿ ಮುಕ್ತಿಯೆಲ್ಲಿವುದೋ? ವಿರಕ್ತಿ ವೀರಶೈವ
ವಿಚಾರ ಅವನಿಗೆಲ್ಲಿಯದೋ? ಇಲ್ಲ ಅಖಂಡ ಪರಿಪೂರ್ಣ ಘನಲಿಂಗ
ಗುರು ಚೆನ್ನಬಸವೇಶ್ವರ ಶಿವ ಸಾಕ್ಷಿಯಾಗಿ.[೧೭]

ಶಿವಭಕ್ತರಿಗೆ ಜೀವಂತಿಗೆ ಸರಿ ಎಂದು ವಾದಿಸುವರಿಗೆ ಹೇಳುವ ಬುದ್ಧಿಯ ಮಾತಿದು ಭಕ್ತ ಎಂದರೆ ಅದೊಂದು ಅತ್ಯುನ್ನತ ಸ್ಥಾನ, ಆಸ್ಥಾನಕ್ಕೂ ವ್ಯಕ್ತಿಗೂ ಸಮನಲ್ಲ ಎಂಬುದೇ ವಚನದ ಸಾರಾಂಶ. ಕುದುರೆಯಂತೆ ಕತ್ತೆಗೂ ಕೂಡ ದೈಹಿಕ ಆಕಾರ ಒಂದೇ ಆದರೆ ಅವುಗಳ ಗುಣ ಬೇರೆ ಬೇರೆ. ಪತಿವ್ರತೆಗೆ ಸೊಳೆ ಸಮನವಲ್ಲ, ಸನ್ಯಾಸಿಗೆ ವ್ಯಾಮೂಹ ಸರಿಯಲ್ಲ. ಕತ್ತಲಿಗೂ ಬೆಳಕಿಗೂ ಸಮನಲ್ಲ, ಅದರಂತೆ ಭಕ್ತ ಮತ್ತು ಭಕ್ತಿ ಬೇರೆ ಎಂದು ತಿಳಿಯಬೇಕು.

ಗುರು ಬಡವನೆಂದು ಶಿರಮಣಿಯದು. ತಲೆಬಾಗ(ದೆ) ನೆರೆ ಪರವಾದಿ
ಪಾತಕರ ಮನೆಯ ಅನ್ನ ಮಾಂಸದ ಸಮಾನವೆಂದು
ಜರೆವರು ಗುರು ಹಿರಿಯ(ರ) ಪರಶಿವ ನಿಮಗೊಲಿಯ ಕಾಣಾ
ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ.[೧೮]

ಗುರು ಬಡವನೆಂದು ತಿಳಿದು ಅವರಿಗೆ ಶಿರಬಾಗಿ ನಮಸ್ಕರಿಸದೇ ಇದ್ದರೆ ಅಂತವರು ಕಡು ಪಾತಕಿಗಳು. ಹೊಲೆಯ ಮನೆಯ ಮಾಂಸಕ್ಕೆ ಸಮ. ಗುರುವಿನಲ್ಲಿಯ ಜ್ಞಾನಕ್ಕೆ ನಾವು ನೀವೆಲ್ಲರೂ

ತಲೆಬಾಗಲೇ ಬೇಕು. ಅದನ್ನು ಬಿಟ್ಟು ಅವರ ಹಣ ಅಂತ್ರಸ್ತಿಗೆ ತಲೆಬಾಗಬಾರದು. ನಿಜವಾದ ಗುರುವಿಗೆ ಗೌರವ ಕೊಡದವರಿಗೆ ಶಿವನೊಲಿಯುವುದಿಲ್ಲ ಎಂಬುದೇ ಈ ವಚನದ ತಾತ್ಪರ್ಯ.

ಭಕ್ತರಾದರೆ ಎಂತಹ ಭಕ್ತರಾಗಬೇಕು ತಮ್ಮನ್ನೇ ಸಂಪೂರ್ಣವಾಗಿ ದೇವರಿಗೆ ಅರ್ಪಿಸುವಂತಹ ಭಕ್ತನಾಗಬೇಕು. ಕೇವಲ ಸಮಾಜದಲ್ಲಿ ವೇಷಭೂಷಣ ಧರಿಸಿ ಡಾಂಬಿಕ ಭಕ್ತನಾಗಬಾರದು. ಅಂತಹ ಡಾಂಬಿಕನಲ್ಲದ ಭಕ್ತಗೆ ಶರಣು ಶರಣಾರ್ಥಿ ಎಂದು ಹೇಳುತ್ತಾರೆ.

ಹಿಂದೆ ಶಿವಭಕ್ತಿಗೋಸ್ಕರ ತನ್ನ ಮಗನ ಶಿರವನ್ನೇ ಕಡಿದು ಶಿವನಿಗೆ ಉಣಬಡಿಸಿದ ಸಿರಿಯಾಳಳನಂತಾಗಬೇಕು. ತನ್ನ ತಾಯಿ ಮಾತಿಗೆ ಬೆಲೆ ಕೊಟ್ಟ ತನ್ನ ತಂದೆಯನ್ನೇ ತಡೆದು ತಲೆಯನ್ನು ಕಳೆದುಕೊಂಡ ಗಣಪತಿಯಂತಿರಬೇಕು. ಇದ್ದರೆ ಇಂತಹ ಭಕ್ತರಿರಬೇಕು. ಭೂಮಿ ಇರುವವರೆಗೂ ಇವರನ್ನು ಸ್ಮರಿಸುತ್ತೇನೆ. ಅದೇ ನಿಸ್ವಾರ್ಥ ಭಕ್ತನ ಭಕ್ತಿ.

**ಅಡಿಟಿಪ್ಪಣಿಗಳು**

೧. ಶಿವಣ್ಣ ಎಸ್.(ಸಂ), ಕುಷ್ಟಗಿ ಕರಿಬಸವೇಶ್ವರನ ವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ಪು.೨

೨. ಅದೇ, ಪು.೨

೩. ಅದೇ, ಪು.೨

೪. ಅದೇ, ಪು.೩

೫. ಅದೇ, ಪು.೫

೬. ಅದೇ, ಪು.೭

೭. ಅದೇ, ಪು.೮

೮. ಅದೇ, ಪು.೯

೯. ಅದೇ, ಪು.೯

೧೦. ಅದೇ, ಪು.೧೧

೧೧. ಅದೇ, ಪು.೧೧

೧೨. ಅದೇ, ಪು.೧೧

೧೩. ಅದೇ, ಪು.೧೨

೧೪. ಅದೇ, ಪು.೧೩

೧೫. ಅದೇ, ಪು.೧೬

೧೬. ಅದೇ, ಪು.೧೬

೧೭. ಅದೇ, ಪು.೧೬

೧೮. ಅದೇ, ಪು.೧೮

೫

## ಚೆನ್ನಬಸವಣ್ಣನವರ ವಚನಗಳು

ಸುರೆಯ ಮಡಕೆಗೆ ಹೊರಗೆ ಬೂದಿಯ ಹೂಸಿದರೇನೋ?
ಒಳಗೆ ಶುದ್ಧವಾಗಬಲ್ಲುದೇ?
ಗುರುಕಾರುಣ್ಯವ ನೆಲೆಗೊಂಡು
ಗುರುಲಿಂಗ ಜಂಗಮವೊಂದೇಯೆಂದು ಅರಿಯದಿದ್ದರೆ
ಕೂಡಲ ಚೆನ್ನ ಸಂಗಮದೇವರಲ್ಲ
ಭಕ್ತಿಸ್ಥಲ ಎಲ್ಲರಿಗೆಯೂ ಸೂರೆಯೆ[೦]

ಈ ವಚನದಲ್ಲಿ ಡಾಂಬಿಕ ಭಕ್ತಿ ಮತ್ತು ಗುರುವಿನ ಮಹತ್ವದ ಬಗ್ಗೆ ತಿಳಿಸಿದ್ದಾರೆ. ಭಕ್ತನಾದ ಬಳಿಕ ಆಂತರಿಕವಾಗಿ ಮತ್ತು ಬಾಹ್ಯವಾಗಿ ಪರಿಶುದ್ಧವಾಗಿರಬೇಕು ಅವನೇ ನಿಜವಾದ ಭಕ್ತ. ಹೆಂಡದ ಮಡಿಕೆಗೆ ಒಳಗೆಲ್ಲ ಹೆಂಡ ತುಂಬಿ, ಹೊರಗೆ ಮಾತ್ರ ಬೂದಿಯ ಬಳಿದರೆ ಅದು ಶುದ್ಧವಾಗಲಾರದು. ಒಳಗಿರುವ ಹೆಂಡ ಮಜ್ಜಿಗೆಯಾಗಲೂ ಸಾಧ್ಯವಿಲ್ಲ. ಗುರುವಿನ ಭಕ್ತನಾಗಿ ಗುರುವಿನ ಕಾರುಣ್ಯವ ಪಡೆದ ಮೇಲೆ ಗುರು, ಲಿಂಗ ಜಂಗನು ಈ ಮೂರು ಒಂದೇ ಎಂದು ಅರಿಯಬೇಕು ಇಲ್ಲವಾದರೆ ಅವನು ನಿಜ ಭಕ್ತನಲ್ಲ ಎಂದರ್ಥ

ಈಗ ಈ ಮೂರನ್ನು ನಂಬಿ ಸಂಗಯ್ಯನಲ್ಲಿ ನನ್ನರಿಕೆ ಇಟ್ಟಾಗ ಮಾತ್ರ ಭಕ್ತಿಸ್ಥಲ ಲಭಿಸುತ್ತದೆ. ಅದು ಮೇಲೆ ಹೇಳಿದ ಸೊರೆಯಾಗಿಬಿಡುತ್ತದೆ ಎಂದು ಹೇಳಿದ್ದಾರೆ.

ಹೆಣ್ಣಿನ ಮೂಲ, ನದಿಮೂಲ, ಋಷಿಮೂಲ, ಈ ಮೂರನ್ನು ಕೇಳಬಾರದು ಎಂದು ದೊಡ್ಡವರು ಹೇಳುತ್ತಾರೆ. ಅದೇ ರೀತಿ ಇಲ್ಲಿ ಚೆನ್ನಬಸವಣ್ಣನವರು ಗುರುಲಿಂಗ ಜಂಗಮದ ಭೇದವನ್ನು ತಿಳಿಯಬೇಡಿ ಎಂದು ಹೇಳುತ್ತಾರೆ.

**ಸಾರಾಂಶ**

ಗುರುವು ಹೊರಗಡೆ ಎಷ್ಟೇ ಕೆಟ್ಟವರಾಗಿರಲಿ, ಅವರ ವೈಯಕ್ತಿಕ ಗುಣಗಳು ಏನೇ ಇರಲಿ ಆದರೆ ಗುರುವಿನ ಮಹತ್ವ ದೊಡ್ಡದು. ಅದಕ್ಕಾಗಿ ಗುರುವಿನಲ್ಲಿ ಗುಣ ಹರಸಬೇಡ ಎನ್ನುವರು. ಲಿಂಗವೆಂಬುದು

ದೇವರ ಪ್ರತಿರೂಪ ಅದು ಹೀಗೆ ಇರಬೇಕು ಎಂಬ ನಿಯಮವಿಲ್ಲ. ಕಲ್ಲು ಗುಂಡುಕೂಡ ದೇವರೇ ಅದಕ್ಕಾಗಿ ಲಿಂಗದಲ್ಲಿ ಲಕ್ಷಣವನ್ನು ಕೇಳಬೇಡ ಎನ್ನುತ್ತಾರೆ. ಮನುಷ್ಯ ಉತ್ತಮನಾಗಲು ಯಾವ ಜಾತಿಯಾದರೇನು? ಉತ್ತಮ ಶರಣ ಎನಿಸಿಕೊಳ್ಳುವುದು ಅವನ ಜಾತಿಯಿಂದಲ್ಲ, ಅವನ ಗುಣಗಳಿಂದ. ಅದಕ್ಕಾಗಿ ಜಂಗಮನಲ್ಲಿ ಜಾತಿ ಕೇಳಬಾರದು.

ಮೇಲಿನ ಮೂವರ ಬಗ್ಗೆ ಅನುಮಾನ ಪಟ್ಟರೆ ಅವರಿಗೆ ನರಕ ತಪ್ಪದು ಎಂದು ಹೇಳಿದ್ದಾರೆ.

ಗುರುವಿನಲ್ಲಿ ಗುಣವನರಸುವರೆ?
ಲಿಂಗದಲ್ಲಿ ಲಕ್ಷಣವನರಸುವರೆ?
ಜಂಗಮದಲ್ಲಿ ಜಾತಿಯನರಸುವರೆ
ಅರಸಿದರೆ ನಾಯಕ ನರಕ ತಪ್ಪದು
ಕೂಡಲ ಚೆನ್ನಸಂಗಮದೇವ[5]

ಗುರುಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ
ಒಂದೇಯೆಂಬ ಸುರೆಯ ಭುಂಜಕರ ಮಾತ ಕೇಳಲಾಗದು
ಅದೇನು ಕಾರಣವೆಂದರೆ
ಪಾದವಿಡಿದು ಅವಧರಿಸಿಕೊಂಡುದೆ ಲಿಂಗ
ಪಾದವಿಡಿಯದಿದ್ದರೆ ಕಲ್ಲು
ಪಾದವಿಡಿದಾತನೆ ಜಂಗಮ
ಪಾದವಿಡಿಯದಾತನೆ ಮಾನುಷ
ಭಯ ಭೀತಿ ಭೃತ್ಯಾಚಾರದಿಂದ
ದೀರ್ಘದಂಡ ನಮಸ್ಕಾರ ಮಾಡಿ ಕೊಂಡರೆ
ಪಾದೋದಕ ಪ್ರಸಾದ
ಕೊಳ್ಳದೆ ಉದಕ ಓಗರ
ಚಿತ್ತ ಶುದ್ಧವಾಗಿ ಧರಿಸಿಕೊಂಡುದೆ ವಿಭೂತಿ ರುದ್ರಾಕ್ಷಿ
ಶುದ್ಧವಿಲ್ಲದುದೆ ಬೂದಿ ಮರನಮಣಿ
ಕೂಡಲ ಚೆನ್ನಸಂಗಮದೇವ ಶ್ರೀ ಸಾಕ್ಷಿಯಾಗಿ[6]

### ಸಾರಾಂಶ

ಈಗ ಒಳ್ಳೆಯ ಭಕ್ತರಿಗೆ ಕಾಲವಲ್ಲ ಕೇವಲ ಆಡಂಬರದ ಭಕ್ತರಿಗೆ ಮಾತ್ರ ಕಾಲ ಎಂಬುದನ್ನು ಚೆನ್ನಬಸವಣ್ಣ ಆಗಲೇ ಹೇಳಿದ್ದಾರೆ. ಯಾರು ಶರಣರ ಪಾದವಿಡಿದು ಅವರನ್ನೇ ದೇವರೆಂದು ತಿಳಿದು,

ಅವರ ಕಾಲಿಗೆ ಬಿದ್ದು ನಮಸ್ಕರಿಸಿ ಅವರ ಪಾದವನ್ನು ತೊಳೆದು ಕುಡಿದರೆ ಅದೇ ಪಾದೋದಕ. ಇಲ್ಲವಾದರೆ ಅವನು ಭಕ್ತನೇ ಅಲ್ಲ ಎಂದು ಹೇಳುವ ಕಾಲ ಬಂದಿದೆ.

ಇಲ್ಲ ಸಲ್ಲದ ಆಡಂಬರ ಪೂಜೆ ಮಾಡಿ ಮೈತುಂಬ ವಿಭೂತಿ ಬಳಿದುಕೊಂಡರೆ ಮಾತ್ರ ಭಕ್ತನಲ್ಲ. ಮನಸ್ಸು ಶುದ್ಧವಾಗಿದ್ದು, ನಿರ್ಮಲ ಚಿತ್ತದಿಂದ ಪೂಜಿಸಿದರೆ ಆ ದೇವರು ಒಲಿದೇ ಒಲಿಯುತ್ತಾನೆ. ಇಲ್ಲವಾದರೆ ಅವೆಲ್ಲ ಬೂದಿಗೆ ಸಮ ಎಂದು ಹೇಳುತ್ತಾರೆ.

ವಚನ

ಆಚಾರವಿಲ್ಲದ ಗುರು ನರ
ಆಚಾರವಿಲ್ಲದ ಲಿಂಗ ಕಲ್ಲು
ಆಚಾರವಿಲ್ಲದ ಜಂಗಮ ಮನುಷ್ಯ
ಆಚಾರವಿಲ್ಲದ ತೀರ್ಥ ಉದಕ
ಆಚಾರವಿಲ್ಲದ ಪ್ರಸಾದ ಓಗರ
ಆಚಾರವಿಲ್ಲದ ಭಕ್ತ ನಾಯಿ
ಸತ್ಯ ಸದಾಚಾರವುಳ್ಳ ಭಕ್ತನ ಮನೆಯ ಹೊಕ್ಕು
ಲಿಂಗಾರ್ಚನೆಯ ಮಾಡುವುದು
ಸತ್ಯ ಸದಾಚಾರವುಳ್ಳ ಜಂಗಮದಲ್ಲಿ
ಪಾದೋದಕ ಪ್ರಸಾದವಕೊಂಡು ಅನುಭಾವ ಕೇಳುವುದು
ಕೂಡಲ ಚೆನ್ನಸಂಗಮದೇವ ನೀ ಸಾಕ್ಷಿಯಾಗಿ[೪]

ಈ ಮೇಲಿನ ವಚನದಲ್ಲಿ ಗುರು, ಲಿಂಗ, ಜಂಗಮ, ತೀರ್ಥ, ಪ್ರಸಾದ, ಭಕ್ತ. ಇವುಗಳ ಬಗ್ಗೆ ತಿಳಿಸಿ ಹೇಳುತ್ತಾನೆ. ಎಂತಹ ಸ್ಥಳದಲ್ಲಿ ವಾಸಿಸಬೇಕು ಹೇಗಿರಬೇಕು ಎಂಬುದನ್ನು ಈ ವಚನದಲ್ಲಿ ತಿಳಿಸಿದ್ದಾನೆ.

ಗುರುವಿಗೆ ತನ್ನದೇ ಆದ ಗುಣ, ವ್ಯಕ್ತಿತ್ವ ಇರುತ್ತದೆ. ಅವುಗಳನ್ನು ಬಳಸಿಕೊಂಡು ಸಮಾಜ ತಿದ್ದುವ ಕೆಲಸ ಮಾಡಬೇಕು. ಇಲ್ಲವಾದರೆ ಅವನು ಗುರುವಲ್ಲ ಕೇವಲ ನರಮನುಷ್ಯ. ಆಚಾರವಿಲ್ಲದ ಲಿಂಗ ಅದು ಕಲ್ಲು ಅದಕ್ಕೆ ಯಾವ ಮಹತ್ವವೂ ಇರುವುದಿಲ್ಲ. ವಿಚಾರವಿಲ್ಲದ ಜಂಗಮ ಜಂಗಮನೇ ಅಲ್ಲ ಅವನೊಬ್ಬ ಮನುಷ್ಯ. ಏಕೆಂದರೆ ಜಂಗಮನೆಂದರೆ ಎಲ್ಲವನ್ನು ತ್ಯಜಿಸಿ ಜಂಗಮನಾಗಿರುತ್ತಾನೆ. ಅದೇ ರೀತಿ ನಡೆದುಕೊಳ್ಳದಿದ್ದರೆ ಅವನು ಮನುಷ್ಯ. ನೀರಿಗೆ ಆಯಾ ಸ್ಥಳ, ಕರ್ಮದ ಮೇಲೆ ಅದಕ್ಕೆ ಮಹತ್ವ ಬರುತ್ತದೆ. ನೀರು ದೇವಾಲಯದಲ್ಲಿ ಆಚಾರವಂತಿಕೆಯಿಂದ ಪೋಷಿಸಿಕೊಟ್ಟರೆ ಅದು ತೀರ್ಥ ಇಲ್ಲವಾದರೆ ಕೇವಲ ನೀರಷ್ಟೇ. ಆಚಾರವಿಲ್ಲದ ಪ್ರಸಾದ ಕೇವಲ ಅನ್ನಕ್ಕೆ ಸಮ. ನಿತ್ಯ ಲಿಂಗಾರ್ಚನೆ

ಸತ್ವದ ಗುಣಗಳನ್ನು ಬೆಳೆಸಿಕೊಂಡು ಜಂಗಮರ ಸಹವಾಸ ಮಾಡಿ ಅವರ ಅನುಭಾವ ಪಡೆದೊಡೆ ಅವನೇ ನಿಜವಾದ ಭಕ್ತ.

**ಸಾರಾಂಶ**

ನಮ್ಮವರು ಈಗ ಹಸಿದವರಿಗೆ ಅನ್ನ ನೀಡದವರು. ಕೇವಲ ಕಲ್ಲು ಮೂರ್ತಿಗಳಿಗೆ ಪ್ರಸಾದ ತೋರಿಸಿದರೆ ಅವರ ಕೆಲಸ ಮುಗಿಯಿತು ಎಂದು ತಿಳಿಯುತ್ತಾರೆ. ಅದನ್ನೇ ಚೆನ್ನಬಸವಣ್ಣ ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾರೆ.

ದೂರದಲ್ಲಿ ನಿಂತು ದೇವರಿಗೆ ಕೇವಲ ಎಡೆಯನ್ನು ತೋರಿಸಿ ತಾವೇ ಸ್ವಾಹ ಮಾಡುವವರು ದುರಾಚಾರಿಗಳು. ದೇವಾಲಯಕ್ಕೆ ಹೋಗದೆ ಮನದಲ್ಲಿಯೇ ಪೂಜಿಸುತ್ತೇನೆ ಎಂಬುವರು ಭ್ರಮಿತರು. ಏಕೆಂದರೆ ಮನಸ್ಸು ಚಂಚಲ. ತಾನು ಉಣ್ಣದಿದ್ದರೂ ಹಸಿದವರಿಗೆ ಅನ್ನ ನೀಡಿದರೆ ಅವನೇ ಉತ್ತಮನು. ನಾವು ಬೇರೆಯವರಿಗೆ ಕೊಡುವುದಾದರೂ ಭಾವಶುದ್ಧದಿಂದ ಕೊಡಬೇಕು. ಇಲ್ಲವಾದರೆ ಸತ್ತ ನಾಯಿಯನ್ನು ಹಣಕೊಟ್ಟು ತಂದು ಮನೆಯ ಅಟ್ಟದ ಮೇಲಿರಿಸಿಕೊಂಡಂತೆ ಎಂದು ಹೇಳುತ್ತಾರೆ.

ದೂರದಲ್ಲಿ ಅರ್ಪಿತನೆಂಬ ದುರಾಚಾರಿಗಳ ಮಾತ ಕೇಳಲಾಗದು
ಭಾವದಲ್ಲಿ ಅರ್ಪಿತನೆಂಬ ಭ್ರಮಿತರ ಮಾತ ಕೇಲಲಾಗದು
ಅಂತರಂಗವೆಂಬ ಅನಚಾರಿಗಳ ಮಾತು ಕೇಳಲಾಗದು
ತಾನು ಉಂಡುವನ್ನಕ್ಕ
ತನ್ನ ಕಾಯಕದ ಲಿಂಗಕ್ಕೆ
ಭಾವಶುದ್ಧದಲ್ಲಿ ಕೊಟ್ಟಲ್ಲದೆ ಕೊಂಡನಾದೊಡೆ
ಸತ್ತನಾಯಿಯ ಅರಸಿಕೊಂಡು
ಗದ್ಯಾಣ ತೊಕವ ಕೊಂಡಂತೆ ಕಾಣ
ಕೂಡಲ ಚೆನ್ನಸಂಗಮದೇವ

ಬ್ರಾಹ್ಮಣ ಭಕ್ತನಾದರೇನು ಸೂತಕ ಪಾತಕಂಗಳ ಬಿಡ
ಕ್ಷತ್ರಿಯ ಭಕ್ತನಾದಡೇನು ಆಲಾಪ ಬಿಡ
ವೈದ್ಯ ಭಕ್ತನಾದಡೇನು ಕಪಟವ ಬಿಡ
ಶೂದ್ರ ಭಕ್ತನಾದಡೇನು ಸಜಾತಿಧರ್ಮವ ಬಿಡ
ಇಂತಿ ಸೂತಕ ಪಾತಕ ಕಪಟ ಜಾತಿ ಡಂಬಕರ ಮೆಚ್ಚುವನೆ
ಕೂಡಲ ಚೆನ್ನಸಂಗಮದೇವ

"ಹುಟ್ಟು ಗುಣ ಸುಟ್ಟರೂ ಹೋಗದು" ಎಂಬ ಗಾದೆ ಮಾತಿನಂತೆ ಮಾನವ ಹುಟ್ಟುಗುಣಗಳು ಎಂದಾದರೂ ಒಂದು ದಿನ ಮರುಕಳಿಸುತ್ತವೆ.

ಬ್ರಾಹ್ಮಣರು ಎಂತಹ ಭಕ್ತನಾದರೂ ಅವರು ತಮ್ಮ ಪೌರೋಹಿತ್ಯದಂತಹ ಗುಣಗಳನ್ನು ಬಿಡುವುದಿಲ್ಲ. ಅಮಾಯಕರನ್ನು ಸುಲಿಗೆ ಮಾಡುತ್ತಾ ತಮ್ಮ ಪೌರೋಹಿತ್ಯವನ್ನು ಮೆರೆಯುತ್ತಿದ್ದಾರೆ. ಕ್ಷತ್ರಿಯರು ಬೇಟೆಯಾಡುವವರು ಮತ್ತು ಅತೀ ಮಾತಿನವರು ಇವರು ಎಷ್ಟೇ ಭಕ್ತರಂತೆ ಬದಲಾಗಲು ಹೋದರೂ ಕೂಡ ಅವರ ಗುಣ ಬದಲಾಗುವುದಿಲ್ಲ.

ವೈಶ್ಯರು, ವ್ಯಾಪಾರ ಮಾಡುವವರು ಅವರೂ ಕೂಡ ನಾವು ಭಕ್ತರಾಗುತ್ತೇವೆ ಎಂದು ಭಕ್ತರಾದರೂ ಕೂಡ, ಅವರು ಜನರಿಗೆ ಮೋಸ ಮಾಡುವುದನ್ನು ಬಿಡುವುದಿಲ್ಲ. ಅದನ್ನು ಅವರು ವ್ಯಾಪಾರ ಧರ್ಮ ಎಂದೇ ತಿಳಿಯುತ್ತಾರೆ. ಶೂಧ್ರ ಭಕ್ತನಾದರೂ ತಮ್ಮ ಜಾತಿಯ ಗುಣವನ್ನು ಅವರು ಬಿಡುವುದಿಲ್ಲ.

ಈ ವಚನದಲ್ಲಿ ಸಮಾಜದ ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಇವರ ಉದಾ. ಕೊಡುವುದರ ಮೂಲಕ ಸಮಾಜ ತಿದ್ದುವ ಕೆಲಸ ಮಾಡಿದ್ದಾರೆ ಎಂಬುದನ್ನು ಈ ವಚನದಲ್ಲಿ ತಿಳಿಸಿದ್ದಾರೆ.

ಸಾರಾಂಶ

ಕೆಳಗಿನ ವಚನದಲ್ಲಿ ಭಕ್ತರ ನಿಷ್ಠೆಯ ಬಗ್ಗೆ ತಿಳಿಸಿದ್ದಾರೆ. ಇಂದಿನ ಬಾಹ್ಯ ಪ್ರಪಂಚದಲ್ಲಿ ಕೇವಲ ಆಡಂಬರ ಭಕ್ತರೇ ಬಹಳ. ಅದಕ್ಕಾಗಿ ಅಂಥಹ ಪೊಳ್ಳು ಭಕ್ತರ ಕಂಡು ಮನನೊಂದು, ಕೆಲ ಉಪಮೇ ಕೊಡುವುದರ ಮೂಲಕ ತಿಳಿಸಿದ್ದಾನೆ.

ವೀರಶೈವನಾದ ಮಾತ್ರಕ್ಕೆ ಅವನು ಭಕ್ತನಾಗಲಾರ ಏಕೆಂದರೆ ಅವನು ಪೂರ್ವಾಪರಕ್ಕೆ ಒಳಗಾಗಿರಬಾರದು ಅಂದಾಗ ಮಾತ್ರ ಅವನು ನಿಜವಾದ ಭಕ್ತ. ಪಾವಿತ್ರತೆಯನ್ನು ಕಾಯ್ದುಕೊಳ್ಳದ ಹೆಣ್ಣು ಭಕ್ತಳಾದರೇನು ಆಕೆ ತನ್ನ ನೀಚಕೆಲಸವನ್ನು ಬಿಡದಿದ್ದರೆ, ರಾಜರು ಯಾವಾಗಲೂ ದರ್ಪದಿಂದ, ಅಧಿಕಾರದಿಂದ ಕೂಡಿರುತ್ತಾರೆ. ಅಂತವರು ಭಕ್ತರಾದೆವೆಂದು ತಮ್ಮ ಮೂಲ ಗುಣವಾದ ದರ್ಪವನ್ನು ಬಿಡದಿದ್ದರೆ ಅದರಿಂದ ಏನೂ ಪ್ರಯೋಜನವಿಲ್ಲ. ಈ ಮೂವರಿಗೆ ಲಿಂಗಧಾರಣೆ ಮಾಡಿಸಿದವ ವ್ಯವಹಾರಿ ತೆಗೆದುಕೊಂಡವರು. ಲಾಭಕೋರರು. ಇವರ ಭಕ್ತಿ ಹೇಗಿತ್ತೆಂದರೆ ಊರ ಹೊರಗೆ ಗಣೇಶನ ಪೂಜೆ ಮಾಡಿ ಊರೊಳಗೆ ತಂದು ತಿಪ್ಪೆಯ ಮೇಲೆ ಕೂರಿಸಿದಂತಾಗುತ್ತದೆ.

ಗುರು ಲಿಂಗ ಜಂಗಮದಲ್ಲಿ ಭಕ್ತಿ ಇರದ ಇಂತವರು ಭ್ರಷ್ಟರು. ಇಂತವರನ್ನು ನಮ್ಮ ಕೂಡಲ ಚೆನ್ನಸಂಗ ಮೆಚ್ಚುವುದಿಲ್ಲ ಎಂದು ಹೇಳುತ್ತಾನೆ.

ಭವಿ ಭಕ್ತಲಾದರೇನು ಪೂರ್ವಶ್ರಮವಳಿಯದನ್ನಕ್ಕ?
ವೇಶಿಯು ಭಕ್ತೆಯಾದಡೇನು ಎಂಜಲ ತಿಂಬುವ ಬಿಡದನ್ನಕ್ಕ
ಅರಸು ಭಕ್ತನಾದರೇನು ಅಹಂಕಾರವ ಬಿಡದನ್ನಕ್ಕ?
ಇಂತೀ ಮೂವರಿಗೆ ಲಿಂಗವ ಕೊಟ್ಟಾತ ವ್ಯವಹಾರಿ ಕೊಂಡಾತ ಲಾಭಕಾರಿ
ಈ ಮೂವರ ಭಕ್ತಿ
ಒಕ್ಕಲಗಿತ್ತಿ ಹೊಸ್ತಿಲ ಪೂಜೆಯ ಮಾಡಿ ದಾಟಿದಂತಾಯಿತು
ಹಟ್ಟಿ ಹೊರಗೆ ಬೆನವನ ಪೂಜೆ ಮಾಡಿ
ತಿಪ್ಪೆಯೊಳಗೆ ಬಿಟ್ಟಂತಾಯಿತು
ಗುರುಲಿಂಗ ಜಂಗಮದಲ್ಲಿ
ನಿಷ್ಠೆಯಿಲ್ಲದ ಭ್ರಷ್ಟಾರ ಮೆಚ್ಚುವನೆ
ಕೂಡಲ ಚೆನ್ನಸಂಗಮದೇವ?[೬]

ಮಧುರದ ಗುಣವ ಇರುಹೆ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು
ವೇಳ್ಯದ ಗುಣವ ಕೋಳಿ ಬಲ್ಲುದು
ಮನುಷ್ಯನಾದರೂ ಆಗಲಿ
ಮಹೇಶ್ವರನಾದರೂ ಆಗಲಿ
ಶಿವಜ್ಞಾನಿಗಳ ಪಾದವ ನೆಲೆಯದಿದ್ದರೆ
ಆ ಇರುಹೆ ಆ ಕಾಗೆ ಆ ಕೋಳಿಗಿಂದತ್ತತ್ತಿ ಕಾಣ
ಕೂಡಲ ಚೆನ್ನಸಂಗಮದೇವ[೭]

ಯಾರೇ ಆಗಲಿ ಶಿವಜ್ಞಾನಿಗಳ ಪಾದವ ಅನವರತ ನೆನೆಯ ಬೇಕು ಇಲ್ಲವಾದರೆ ಅವರು ಕ್ರಿಮಿ, ಕೀಟ, ಪಶುಗಳಿಗಿಂತ ಕನಿಷ್ಠರಾಗುತ್ತಾರೆ ಎನ್ನುವುದೇ ಈ ವಚನದ ಸಾರಾಂಶ. ಋಷಿಗಳು ಮುನಿಗಳೂ, ಸಾಕ್ಷಾತ್ ದೇವರನ್ನು ಒಲಿಸಿಕೊಂಡ ಮಾನವ ರೂಪಿಗಳಾಗಿದ್ದಾರೆ. ಅವರು ದೈವ ಸ್ವರೂಪ ಅದಕ್ಕಾಗಿ ಅಂತವರ ನಾಮ ಸ್ಮರಣೆ ಮತ್ತು ಪಾದಸೇವೆ ಮಾಡಬೇಕು ಎಂದು ಹೇಳಿದ್ದಾರೆ.

ಸಿಹಿಯ ರುಚಿ ಸಿಹಿ ತಿಂದವರಿಗೇ ಗೊತ್ತು. ಅದಕ್ಕಾಗಿ ಅದರ ರುಚಿ ಇರುವೆಗೆ ಚೆನ್ನಾಗಿ ಗೊತ್ತು. ತಮ್ಮ ವಂಶದ ಗುಣವ ಕಾಗೆ ಬಲ್ಲದು, ಅಂದರೆ ಕಾಗೆಗಳೆಲ್ಲ ಒಂದೇ ಸಮೂಹವಿದ್ದಂತೆ ಎಲ್ಲವನು ಹಂಚಿಕೊಂಡು ತಿನ್ನುತ್ತವೆ. ಕೋಳಿ ನಿದ್ರಾ ಸ್ಥಿತಿಯಲ್ಲಿದ್ದರೂ ಕೂಡ ಅದಕ್ಕೆ ಸಮಯ ಜ್ಞಾನ ಬಹಳ ಅದಕ್ಕಾಗಿ ಅದರ ಕೂಗಿನಿಂದ ವಿಶ್ವದ ಬೆಳಗಿನ ಕಾರ್ಯ ಆರಂಭವಾಗುತ್ತದೆ.

ಹೀಗೆ ನಾವುಗಳೂ ಸಹ, ದೇವರು, ದೇವರ ಮಹತ್ವ ಅವನ ಆರಾಧನೆ ಮಾಡಬೇಕು ಇಲ್ಲವಾದರೆ ಈ ಪ್ರಾಣಿಗಳಿಗಿಂತ ಕಡೆಯಾಗುತ್ತೇವೆ ಎಂದಿದ್ದಾನೆ.

**ಸಾರಾಂಶ**

ಸ್ವಾರ್ಥ ಬುದ್ಧಿಯ ಮನುಷ್ಯ ಅತಿಯಾಸೆಗೆ ಒಳಗಾಗಿ ದಾನ ಧರ್ಮವನ್ನು ಮಾಡುವುದು ಬಿಟ್ಟಿದ್ದಾನೆ. "ಕೊಟ್ಟಾತ ಎಂದೂ ಕೆಡುವುದಿಲ್ಲ" ಎಂಬ ನಾಣ್ಣುಡಿಯಂತೆ ಕೇವಲ ನಾನು ನನ್ನ ಮನೆ ನನ್ನ ಸಂಸಾರ ಎನ್ನುವುದಕ್ಕಿಂತ ಪರರ ಬಗ್ಗೆಯೂ ಸ್ವಲ್ಪ ಕರುಣೆ ಇರಬೇಕು. ಹಸಿದು ಬಂದ ಜಂಗಮನಿಗೆ ಅನ್ನ ನೀಡುವುದಿಲ್ಲ. ಕಲ್ಲಿನ ಮೂರ್ತಿಗೆ ಪ್ರಸಾದ ನೀಡುತ್ತೇವೆ. ಅಂತಹ ಮುರ್ಖರು ನಾವು. ನಮ್ಮಲ್ಲಿರುವ ಏನೇನು ದಾನ ಮಾಡಿದರೆ ಯಾವ ಫಲ ಪ್ರಾಪ್ತಿಯಾಗುತ್ತದೆ ಎಂಬುದನ್ನು ತಿಳಿಯೋಣ.

ಅನ್ನವನ್ನ ದಾನಮಾಡಿದರೆ ನಮಗೆ ಧರ್ಮದ ಫಲ ಪ್ರಾಪ್ತಿಯಾಗುತ್ತದೆ. ಇಲ್ಲದವರಿಗೆ ಬಟ್ಟೆ ದಾನ ಮಾಡಿದರೆ ಪುಣ್ಯದ ಫಲ ದೊರೆಯುತ್ತದೆ. ಹೊನ್ನ ದಾನ ಮಾಡಿದರೆ ನಮ್ಮ ಬಡತನ ತೀರಿ ಸಿರಿತನ ಬರುವುದು. ಹೆಣ್ಣು ದಾನ ಮಾಡಿದರೆ ಇನ್ನೊಂದು ಮನೆ ಬೆಳಗಿದ ಕೀರ್ತಿ ನಿಮಗೆ ಸಿಗುತ್ತದೆ. ಈ ರೀತಿ ಅನ್ನ, ಬಟ್ಟೆ, ಹೊನ್ನು, ಹೆಣ್ಣು ದಾನ ಮಾಡಿದರೆ ಮುಂದೆ ನಮಗೂ ಮುಕ್ತಿ ದೊರೆಯುತ್ತದೆ ಎಂದು ತಿಳಿಸುವುದೇ ಕೆಳಗಿನ ವಚನದ ಸಾರ.

ಅನ್ನದಾನವ ಮಾಡಿದಡೇನಹುದು? ಧರ್ಮವಹದು
ವಸ್ತ್ರದಾನವ ಮಾಡಿದಡೇನಹುದು? ಪುಣ್ಯವಹುದು
ಹೊನ್ನದಾನವ ಮಾಡಿದಡೇನಹುದು? ಸಿರಿಯಹುದು
ಹೆಣ್ಣದಾನವ ಮಾಡಿದಡೇನಹುದು? ಫಲಪರವನೊಯಿವರು
ಚತುರ್ವಿಧಕಾರಣಾದಿಗಳು ಶುದ್ಧವಾದರೆ
ಮುಂದೆ ಮುಕ್ತಿಯಾಗುವುದು
ಕೂಡಲ ಚೆನ್ನ ಸಂಗಮದೇವ[೯]

ಅಂಗದಿಚ್ಛೆಗೆ ಮಧು ಮಾಂಸ ಬಹಳ ಭಂಗಿಯ ತಿಂಬರು
ಕಂಗಳಿಚ್ಛೆಗೆ ಪರವಧುವ ನೆರವರು
ಲಿಂಗಲಾಂಛನವಿದ್ದಲ್ಲಿ ಫಲವೇನು ಲಿಂಗವೇನು?
ಜಂಗಮದ ಮುಖದಲ್ಲಿ ಕುಂದು ಬಂದರೆ
ಕೊಂಡಮಾರಿಂಗೆ ಹೋಗುವದು ತಪ್ಪದು
ಕೂಡಲ ಚೆನ್ನಸಂಗಮದೇವ[೧೦]

ನಿಜವಾದ ಜಂಗಮನು ಅರಿಷಡ್ವರ್ಗಗಳನ್ನು ಜಯಿಸಿ, ಪರಸ್ತ್ರಿ, ಪರಧನ, ಪರರ ಸ್ವತ್ತಿನ ಕಡೆ ಆಸೆಯನ್ನು ಮಾಡದೆ ಇನ್ನೊಬ್ಬರಿಗೆ ಮಾದರಿಯಾಗುವಂತೆ ಇರಬೇಕು, ಅಂದಾಗ ಮಾತ್ರ ಅವರು ನಿಜವಾದ ಜಂಗಮರೆನಿಸಿಕೊಳ್ಳುತ್ತಾರೆ.

ಹಾಗೆ ಮಾಡದೆ ಮೈಮೇಲೆ ಕಾವಿ ಭಟ್ಟೆ ಧರಿಸಿ ಒಳಗಡೆ ಕಾಮ ಬಯಕೆಯನ್ನು ತುಂಬಿಕೊಂಡು ಇಲ್ಲಸಲ್ಲದ ಅಪಚಾರವೆಸಗಿದರೆ, ಅವನು ಯೋಗಿಯಲ್ಲ. ಕಂಗಳಿವೆಯೆಂದು, ನಾನೊಬ್ಬ ಸಾಧು ಎಂಬುದನ್ನು ಮರೆತು ಪರಸ್ತ್ರೀಯ ಕಡೆ ಮೋಹಗೊಳ್ಳುವನು ಯೋಗಿಯಲ್ಲ. ಅಂತವನು ಪ್ರತೀ ದಿನ ಲಿಂಗವನ್ನು ಪೂಜಿಸಿದರೆ ಬರುವ ಪ್ರಯೋಜನವೇನು? ಇಲ್ಲಿ ಅದಕ್ಕಾಗಿ ಬಸವಣ್ಣ ಹೇಳಿದ್ದು, ಅಂತರಂಗ ಮತ್ತು ಬಹಿರಂಗ, ಎರಡೂ ಶುದ್ಧವಾಗಿರಬೇಕೆಂದು. ಅದನ್ನೇ ಚೆನ್ನಬಸವಣ್ಣ ಇಲ್ಲಿ ಮತ್ತೊಮ್ಮೆ ಎಚ್ಚರಿಸುವುದರ ಮೂಲಕ ಅಂತಹ ಅಪಚಾರವೆಸಗಿದರೆ ಅವರಿಗೆ ನರಕ ತಪ್ಪದು ಎಂದು ಹೇಳುತ್ತಾನೆ.

**ಸಾರಾಂಶ**

"ಹೊಗಳಿ ಹೊಗಳಿ ಎನ್ನ ಹೊನ್ನ ಶೂಲಕ್ಕೇರಿಸದಿರಯ್ಯ" ಎಂದು ಬಸವಣ್ಣನವರೇ ಹೇಳಿದ್ದಾರೆ. ಕೆಲಸವಾಗುವಾಗ ಮಾತ್ರ ಹೊಗಳಿ ಕೆಲಸಗಿಟ್ಟಿಸಿಕೊಂಡ ನಂತರ ಎದುರಿಗಿದ್ದರೂ ಮಾತನಾಡಿಸದವ ಮನುಜನಲ್ಲ.

ವೀರಶೈವಧರ್ಮ ಹೇಳುವುದು ಅದನ್ನೇ ನಾವು ಮಾಡಿದ ಕಾಯಕಕ್ಕೆ ಫಲವನ್ನು ಅಪೇಕ್ಷಿಸಬಾರದೆಂದು. ಮಾಡಿದ ಕೆಲಸಕ್ಕೆ ಸಂಭಾವನೆ ಪಡೆದರೆ, ಅದರಲ್ಲಿ ಧರ್ಮ ಎಲ್ಲಿಂದ ಬಂತು. ಅದು ಲಾಭಕ್ಕಾಗಿ ಮಾಡಿದ ಕಾರ್ಯವಾಗುತ್ತದೆ. ಅದಕ್ಕಾಗಿ ಭಕ್ತ ಹೇಗಿರಬೇಕೆಂದರೆ,

ಜನರಲ್ಲಿ ಹಾಡಿ ಬೇಡುವವನು ಜಂಗಮನಲ್ಲ, ಅವರನ್ನು ಹೊಗಳಿ ಮೆಚ್ಚುಗೆಯ ಮಾತುಗಳನ್ನಾಡಿ ಕೇಳುವವನು ಜಂಗಮನಲ್ಲ. ಜನರ ಕಾಯಕ ಕಾರ್ಯವನ್ನು ಕೊಂಡಾಡುವವನು ಜಂಗಮನಾಗಲು ಸಾಧ್ಯವಿಲ್ಲ. ಜನರಲ್ಲಿ ಕಾಡದೆ ಏನನ್ನು ಬೇಡದೆ ತನ್ನ ಕಾಯಕದ ಮೂಲಕ ಸಮಾಜವನ್ನು ತಿದ್ದುವ ಕೆಲಸ ಮಾಡುವವನೆ ನಿಜವಾದ ಜಂಗಮ ಎಂದು ಹೇಳಿದ್ದಾರೆ.

ಭಕ್ತನ ಹಾಡಿ ಬೇಡುವಾತ ಜಂಗಮನಲ್ಲ
ಭಕ್ತನ ಹೊಗಳಿ ಬೇಡುವಾತ ಜಂಗಮನಲ್ಲ
ಭಕ್ತನ ಸ್ತುತಿಸಿ ಬೇಡುವಾತ ಜಂಗಮನಲ್ಲ
ಭಕ್ತನ ಕೊಂಡಾಡಿ ಬೇಡುವಾತ ಜಂಗಮನಲ್ಲ
ಭಕ್ತನವೊಂದಿ ಬೇಡುವಾತ ಜಂಗಮನಲ್ಲ
ಭಕ್ತನ ಕೈವಾರಿಸಿ ಬೇಡುವಾತ ಜಂಗಮನಲ್ಲ

ಕೂಡಲ ಚೆನ್ನಸಂಗಮ ದೇವರಲ್ಲಿ
ಬೇಡದೆ ಮಾಡುವಾತ ಭಕ್ತ
ಬೇಡದೆ ಮಾಡಿಸಿಕೊಂಡಾತ ಜಂಗಮ[೧೯]

ಲೋಕದ ಡೊಂಕ ನೀವು ತಿದ್ದುವಿರಯ್ಯ
ನಿಮ್ಮ ತನುಮನದ ಡೊಂಕ ನೀವು ತಿದ್ದಿಕೊಳಲರಿಯದೆ
ಪುರಾತರು ನುಡಿದಂತೆ ನಡೆಯಲರಿಯದವರೆಲ್ಲ
ಕಡು ಓದಿದ ಗಿಣಿ
ತನ್ನ ಮಲವ ತಾ ತಿಂದಂತೆ
ನೆರೆ ಮನೆಯವರ ದುಃಖವ ಕೇಳಿ
ಗಡ್ಡ ಮಂಡೆಯ ಬೋಳಿಸಿಕೊಂಡು
ಉಪಾದಿ ನುಡಿವರ ಕಂಡರೆ
ಕೂಡಲ ಚೆನ್ನಸಂಗನ ಶರಣರು ನಗುತಿಪ್ಪರಯ್ಯ[೨೦]

ನಾನು ಮಾಡಿದ್ದು ತಪ್ಪು ಎಂದು ತಿಳಿದುಕೊಂಡು ಮತ್ತೆ ಅದನ್ನು ಮಾಡದಿದ್ದರೆ ಜಗತ್ತಿನಲ್ಲಿ ತಪ್ಪುಗಳೇ ಆಗುವುದಿಲ್ಲ. ನಮ್ಮಲ್ಲಿನ ತಪ್ಪುತಿದ್ದುವುದು ಬಿಟ್ಟು ಲೋಕದ ತಪ್ಪನ್ನು ತಿದ್ದಲು ಹೋಗುವವರು ಮೂರ್ಖರು. ನಾವು ಯಾವಾಗಲೂ ನುಡಿದಂತೆ ನಡೆಯಬೇಕು. ಇಲ್ಲವಾದರೆ ನುಡಿಯಬಾರದು ಪಕ್ಕದ ಮನೆಯವರ ದುಃಖದ ಕತೆ ಕೇಳಿ ನಾನು ಗಡ್ಡ ತಲೆ ಬೋಳಿಸಿಕೊಂಡರೆ ನನ್ನಂತಹ ಮೂರ್ಖ ಬೇರೆಯಾರೂ ಇಲ್ಲ. ಇದನ್ನು ಕಂಡು ನಮ್ಮ ಸಂಗಯ್ಯ ನಗುತ್ತಾನೆ ಎನ್ನುತ್ತಾರೆ. ಆಡಿದಂತೆ ಮಾಡದಿದ್ದರೆ ಅವರು ತಮ್ಮ ಮಲ(ಕಕ್ಕಸ)ವನ್ನು ತಾವೇ ತಿಂದಂತೆ ಎಂದು ನೇರವಾದ ಮಾತುಗಳನ್ನು ಹೇಳುವುದರ ಮೂಲಕ ಸಮಾಜ ಸುದಾರಣೆ ಕೆಲಸಕ್ಕೆ ನೆರವಾಗಿದ್ದಾರೆ.

**ಸಾರಾಂಶ**

ಯೋಗಿಗಳು ಯಾವಾಗಲೂ ಇನ್ನೊಬ್ಬರಿಗೆ ಮಾದರಿಯಾಗುವಂತೆ ಇರುಬೇಕು. ಅದನ್ನು ಬಿಟ್ಟು ಹೇಳುವುದು ಒಂದು ಮಾಡುವುದು ಇನ್ನೊಂದು ಎಂಬಂತೆ ಮಾಡಿದರೆ ಅದನ್ನು ನಮ್ಮ ದೇವ ಮೆಚ್ಚನು.

ಅದರಲ್ಲೂ ಹೆಣ್ಣಿನ ವಿಚಾರದಲ್ಲಂತೂ, ತುಂಬಾ ಕಠಿಣ ವ್ಯಕ್ತಿಯಾಗಿರಬೇಕು. ಅಂದಾಗ ಮಾತ್ರ ಅವರ ಸ್ಥಾನಕ್ಕೆ ಒಂದು ಮಹತ್ವ ಸಿಗುತ್ತದೆ. ಇಲ್ಲವಾದರೆ ಅವರ ಸ್ಥಿತಿ ಹೇಗೆ ಎಂಬುದನ್ನು ಈ ವಚನದ ಸಾರದಿಂದ ತಿಳಿಯಬಹುದು.

ದಾಸಿಯ ಸಂಗ ಮಾಡಿದರೆ ಭಂಗಿಯನ್ನು ಸೇವನೆ ಮಾಡಿದಂತೆ. ತಮ್ಮ ಮೋಹಕ್ಕಾಗಿ ವೇಶ್ಯೆಯರ ಸಂಗ ಮಾಡಿದರೆ ಅದು ಮದ್ಯ ಸೇವೆನೆ ಮಾಡಿದಂತೆ, ತಾವೇ ಪರನಾರಿಯರ ಸಂಗ ಮಾಂಸದ ಸೇವನೆ

ಮಾಡಿದಂತೆ, ಗಂಡಸತ್ತ ಹೆಣ್ಣಿನ ಸಂಗ ಮಾಡಿದರೆ ತಮ್ಮ ಮಲ(ಕಕ್ಕಸ)ವನ್ನು ತಿಂದಂತೆ. ಅಪ್ರಾಪ್ತ ಹೆಣ್ಣಿನ ಸಂಗ ಹಸಿ ನೆತ್ತರ ಸೇವನೆ ಮಾಡಿದಂತೆ. ಈ ಪಂಚ ಪಾತಕ ಮಾಡುವ ಪಾತಕರಿಗೆ ಗುರುಲಿಂಗ ಜಂಗಮವಿಲ್ಲ. ನಾನಂತೂ ಮೊದಲೇ ಇಲ್ಲ ಎಂದು ಶಿವ ಹೇಳುತ್ತಾನೆ ಎಂಬುದೇ ಇದರ ಸಾರ.

ದಾಸಿಯ ಸಂಗ ಭಂಗಿಯ ಸೇವನೆ
ವೇಶಿಯ ಸಂಗ ಸುರೆಯ ಸೇವನೆ
ಪರಸ್ತ್ರೀಯರ ಸಂಗ ಮಾಂಸದ ಸೇವನೆ
ಮುಂಡೆಯ ಸಂಗ ಅಮೇಧ್ಯ ಸೇವನೆ
ಅಯಿವರ ಸಂಗವ ಮಾಡುವ ದ್ರೋಹಿಗಳಿಗೆ
ಕಂಠಪವಾಡ ಧೂಳಿಪವಾಡ ಸರ್ವಾಂಗ ಪವಾಡ
ಉಂಚುಯೆಂಬ ಪಂಚಮಹಾಪಾತಕರಿಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ಪಾದೋದಕವಿಲ್ಲ ಪ್ರಸಾದವಿಲ್ಲ
ನಾ ಮೊದಲೇಯಿಲ್ಲ ಕೂಡಲಚೆನ್ನಸಂಗಮದೇವ[೧೩]



ಸ್ತ್ರೀಯರೆಂಬ ಮಾಂಸದ ಪುತ್ತಳಿಯ
ನಿಚ್ಚ ನಿಚ್ಚ ಕಡಿದುಕೊಂಡು ತಿಂಬ ನಾಯಿಗಳಿಗೆ
ಎಲ್ಲಿಯದೊ ಅಚ್ಚಪ್ರಸಾದ? ನಿಚ್ಚ ಪ್ರಸಾದ?
ವ್ರತ ನೇನು ಶೀಲ ಸಂಬಂಧ?
ಅವರ ಅಧರಸೇವನೆಯ ಮದ ಮಾಂಸವು
ಉದರ ಸೇವನೆಯೆ ಸುರೆಮಾಂಸ
ಕಾಮವೆ ಕಬ್ಬಲಿಗೆ ಕ್ರೋಧವೆ ಹೊಲೆಯ
ಲೋಭಾವೆ ಕಳ್ಳ ಮೋಹವೆ ಜಾಲಗಾರ
ಮಧವೆ ಮಾದಿಗ ಮಚ್ಚರವೆ ಸುರಪಾನಿ
ಯಿಂತೀ ಷಡ್ವಿಧ ಭಾವಿಯ ತಮ್ಮೊಳಗೆಯಂ ಬಿಟ್ಟುಕೊಂಡು
ಪಾಕದಲ್ಲಿ ಭವಿ ಪಾಕ ಪರಪಾಕವೆಂಬ
ಪಂಚ ಮಹಾಪಾತಕದ ಮುಖವ ನೋಡಲಾಗದು
ಕೂಡಲ ಚೆನ್ನಸಂಗಮದೇವ[೧೪]

ಪ್ರಸ್ತುತ ವಚನದಲ್ಲಿ ಪಾತಕನು ಮಾಡುವ ಪಾತಕಗಳ ಬಗ್ಗೆ ಮತ್ತು ಅರಿಷಡ್ವರ್ಗಗಳ ಬಗ್ಗೆ ತಿಳಿಸಲಾಗಿದೆ.

ಮನುಷ್ಯ ಸುಂದರವಾದ ಸ್ತ್ರೀ ಕಂಡರೆ ಅವರ ಬಗ್ಗೆ ಮೋಹಿತನಾಗುತ್ತಾನೆ. ಅದೊಂದು ಮಾಂಸದ ಮುದ್ದೆ ಎಂಬುದನ್ನು ಅರಿಯುವುದಿಲ್ಲ. ಅದರ ಸಂಗಮಾಡಿ ಅದರಲ್ಲಿ ಬಿದ್ದು ದಿನನಿತ್ಯ ಅಧರವನ್ನು ಸವಿಯುವಂತವರು ಮಹಾ ಪಾಪಿಗಳು. ಅಂತವರಿಗೆ ಪ್ರಸಾದವಿಲ್ಲ.

ಕಾಮವೆ ಬೇಡನಿದ್ದಂತೆ ಬಲುಕ್ರೂರ, ಕ್ರೋಧವೆ ಹೊಲೆಯ ಹೊಲಸು ತಿನ್ನುವವನು. ಆಸೆಯೇ ಕಳ್ಳ. ಆಸೆಯಿಂದಲೇ ಜನ ಕಳ್ಳರಾಗುವುದು. ಮೋಹವೇ ಮೋಸಗಾರ ಮಧವೆ ಮಾದಿಗ ಅಂದರೆ ಅಹಂಕಾರಿ ಎಂದರ್ಥ. ಮತ್ಸರವೇ ಸುರಪಾನಿ ಹಿಂದೆ ಮಧ್ಯಪಾನ ಮಾಡಿದಂತೆ ಇವೆಲ್ಲವನ್ನು ಒಳಗೆ ಇಟ್ಟಿಕಂಡು ನಯಗಾರರಂತೆ ಸ್ವಾಮಿಗಳಂತೆ ವರ್ತಿಸುವವರನ್ನು ನೋಡಲಾಗದು ಎಂದು ಹೇಳಿದ್ದಾರೆ.

**ಸಾರಾಂಶ**

ಮಡಿ ಮೈಲಿಗೆ, ಶುದ್ದ ಅಶುದ್ಧ, ಆಚಾರ ವಿಚಾರ, ಎಂಬುದು ಏನೇ ಇದ್ದರೂ ಮನುಷ್ಯ ಶುದ್ಧವಾಗಬೇಕಾದರೆ ಅವನ ಮನಸ್ಸು ಪರಿಶುದ್ಧತೆಯಿಂದ ಕೂಡಿರಬೇಕು. ಮಾಡುವುದೆಲ್ಲಾ ಅನಾಚಾರ ಹೆಸರಿಗೆ ಮಾತ್ರ ವಿಭೂತಿ ಗಂಧ ಬಳಿದುಕೊಂಡರೆ ಅವನು ಶುದ್ಧನಲ್ಲ.

ಜಾತಿಯಿಂದ ಮನುಷ್ಯ ಸಣ್ಣನಾಗುವುದಿಲ್ಲ. ಅವನ ವರ್ತನೆಯಿಂದ ಮನುಷ್ಯ ಸಣ್ಣವನಾಗುತ್ತಾನೆ. ದೊಡ್ಡ ಜಾತಿಯಲ್ಲಿ ಹುಟ್ಟಿ ಸಣ್ಣತನ ಮಾಡಿದರೆ ಅವರು ಸಣ್ಣವನೆ ದೇವರಿಗೆ ಅರ್ಪಿಸುವ ನೀರು, ಹೂ, ಹಾಲು, ಎಲ್ಲವೂ ಒಂದು ರೀತಿಯಿಂದ ಎಂಜಲೇ. ಅದನ್ನೇ ನಾವು ಶುದ್ಧವೆಂದು ತಿಳಿದು ದೇವರಿಗೆ ಅರ್ಪಿಸುತ್ತೇವೆ.

ಇಲ್ಲಿ ಯಾವುದು ಶುದ್ಧ ಭೂಮಿ ಅಂದುಕೊಳ್ಳೋಣವೇ? ಅದೂ ಅಲ್ಲ ಏಕೆಂದರೆ ಈ ಭೂಮಿಯ ಮೇಲೆ ನಾನಾ ರೀತಿಯ ಜೀವರಾಶಿ ಹುಟ್ಟಿ ತಮ್ಮ ಕರ್ಮವನ್ನು ಎಸಗುತ್ತವೆ. ಅಂದಾಗ ಭೂಮಿ ತಾನೆ ಹೇಗೆ ಶುದ್ಧವಾಗುತ್ತದೆ? ನೀರನ್ನು ಶುದ್ಧವೆಂದುಕೊಳ್ಳೋಣವೇ? ಅವು ಶುದ್ಧವಲ್ಲ ಏಕೆಂದರೆ ನೀರಿನಲ್ಲಿ ಮೀನು, ಕಪ್ಪೆ, ಮೊಸಳೆ ವಾಸಿಸಿ ಅದನ್ನು ಅಶುದ್ಧಗೊಳಿಸುತ್ತವೆ. ಭೂಮಿಯ ಮೇಲಿನ ನೀರನ್ನು ತಂದು ಇವು ಹೊಸ ನೀರು ಎಂಜಲು ಮಾಡಬೇಡಿ ಅನ್ನುವವರ ಮನವನ್ನು ಶುದ್ಧ ಅಂದುಕೊಳ್ಳಣವೇ? ಅದೂ ಶುದ್ಧವಲ್ಲ. ಏಕೆಂದರೆ ನಮ್ಮ ಮನಸ್ಸಿನಲ್ಲಿ ಬರಬಾರದ ಕಲ್ಪನೆಗಳು ಬಂದು ಚಂಚಲತೆಯಿಂದ ಕೂಡಿ ಏನಾದರೊಂದು ತಪ್ಪುನಿರ್ಧಾರ ತೆಗೆದುಕೊಳ್ಳುತ್ತೇವೆ. ಅದಕ್ಕಾಗಿ ಮನಕೂಡ ಶುದ್ಧವಲ್ಲ, ಕಣ್ಣು ಶುದ್ಧವೇ ಅದೂ ಅಲ್ಲ ಏಕೆಂದರೆ ಕಣ್ಣಿಗೆ ಕಂಡ ವಸ್ತುಗಳ ಬಗ್ಗೆ ಮನಸ್ಸಿನಲ್ಲಿಯೇ ಅಪಚಾರ ಎಸಗುತ್ತೇವೆ. ಅದು ನಮ್ಮ ಅಂತರಂಗಕ್ಕೆ ಮಾತ್ರ ತಿಳಿಯುತ್ತದೆ. ಬಾಹ್ಯಕ್ಕೆ ತಿಳಿಯದು. ಎರಡು ಕೈಗಳು ಶುದ್ಧವಲ್ಲ ಏಕೆಂದರೆ ಒಂದು ಎಂಜಲನ್ನು ಮುಟ್ಟಿ ಅಶುದ್ಧಿಯಾದರೆ ಇನ್ನೊಂದು ಕೈ ಗುದವನ್ನು ಮುಟ್ಟಿ ಅಶುದ್ಧವಾಗುತ್ತದೆ.

ಅದಕ್ಕಾಗಿ ನಿಜವಾದ ಭಕ್ತನಾಗಬೇಕಾದರೆ ತನು ಮನವನ್ನು ಶುದ್ಧಿಗೊಳಿಸಿಕೊಂಡು ಆಸೆ, ಅಹಂಕಾರ, ಭಯ, ಚಿಂತೆ, ವ್ಯಾಮೋಹ ಇವೆಲ್ಲವನ್ನು ಬಿಟ್ಟರೆ ಅವನು ನಿಜವಾದ ಭಕ್ತ ಎಂದು ಚೆನ್ನಬಸವಣ್ಣ ಈ ವಚನದಲ್ಲಿ ಬಳಸಿದ್ದಾನೆ.

ನೆಲಶುದ್ಧವೆಂಬನೆ? ನೆಲಶುದ್ಧವಲ್ಲ
ಅದೇನು ಕಾಣವೆಂದರೆ
ನೆಲದೊಳಗೆ ನಾಲ್ವತ್ತಯೆರಡು ಲಕ್ಷ ಜೀವರಾಶಿಗಳು
ಉತ್ಪತ್ತಿ ಸ್ಥಿತಿ ಲಯವಾದ ಕಾರಣ ನೆಲ ಶುದ್ಧವಲ್ಲ ನಿಲ್ಲಿ
ಜಲ ಶುದ್ಧವೆಂಬೆನೆ? ಜಲ ಶುದ್ಧವಲ್ಲ
ಅದೇನು ಕಾರಣವೆಂದರೆ
ಜಲದೊಳಗೆ ನಾಲ್ವತ್ತಯೆರಡು ಲಕ್ಷ ಜೀವರಾಶಿಗಳು
ಉತ್ಪತ್ತಿ ಸ್ಥಿತಿ ಲಯವಾದ ಕಾರಣ ಜಲ ಶುದ್ಧವಲ್ಲ ನಿಲ್ಲ
ಮನ ಶುದ್ಧವೆಂಬೆನೆ? ಮನ ಶುದ್ಧವಲ್ಲ ನಿಲ್ಲ
ಅದೇನು ಕಾರಣವೆಂದರೆ
ಅಷ್ಟದಳ ಕಮಲದ ಹಂಸನ ನಿಲವನರೀಯದು
ಮನ ಶುದ್ಧವಲ್ಲ ನಿಲ್ಲ
ನಯನ ಶುದ್ಧವೆಂಬೆನೆ? ನಯನ ಶುದ್ಧವಲ್ಲ ನಿಲ್ಲ
ಅದೇನು ಕಾರಣವೆಂದರೆ
ನೋಟದಲ್ಲಿ ನೋಡಿ ಭಾವದಲ್ಲಿ ಕೂಡುವೆನ್ನಕ್ಕ
ನಯನ ಶುದ್ಧವಲ್ಲ ನಿಲ್ಲ
ಹಸ್ತ ಶುದ್ಧವೆಂಬನೆ? ಹಸ್ತ ಶುದ್ಧವಲ್ಲ
ಅದೇನು ಕಾರಣವೆಂದರೆ
ಒಂದು ಹಸ್ತ ಜಿಹ್ವೆಯಲಾಡುವುದು
ಒಂದು ಹಸ್ತ ಗುಹ್ಯದಲಾಡುವುದು
ಹಸ್ತ ಶುದ್ಧವಲ್ಲ ನಿಲ್ಲ
ಇಂತಿ ಶುದ್ಧವಿಲ್ಲವೆಂದು ಅಂತು
ಸಕಲ ಪದಾರ್ಥವನ್ನೆಲ್ಲ ಜಂಗಮಕ್ಕೆ ಕೊಟ್ಟು
ಕೊಂಬಾತನೆ ಶುದ್ಧ ಶೀಲವಂತ
ಅದೇನು ಕಾರಣವೆಂದರೆ
ಭಕ್ತನ ಹೊನ್ನು ಹೆಣ್ಣು ಮಣ್ಣು ತ್ರಿವಿಧ ಮಲವ

ಹಿಡಿದು ಆತ ಶುದ್ಧ
ಜಂಗಮ ತ್ರಿವಿಧಮಲವ ಬಿಟ್ಟು ಆತ ಶುದ್ಧ
ಭಕ್ತ ಅಹಂಕಾರಿ ಜಂಗಮ ನಿರಹಂಕಾರಿ
ಭಕ್ತ ದೇಹಿಕ ಜಂಗಮ ನಿರ್ದೇಹಿತ
ಭಕ್ತಗೆ ಭಯ ಜಂಗಮಕ್ಕೆ ನಿರ್ಭಯ
ಭಕ್ತ ಆಶಕ ಜಂಗಮ ನಿರಾಶಕ
ಭಕ್ತಂಗೆ ನಾನಾ ಚಿಂತೆ ಜಂಗಮನಕ್ಕೆ ನಿಶ್ಚಿಂತೆ
ಇಂತಿ ನಿಶ್ಚಿಂತ ಜಂಗಮ ದೇವರಲ್ಲಿ
ಸಕಲ ಪದಾರ್ಥವ ಕೊಟ್ಟು ಕೊಂಡರೆ
ಆ ಭಕ್ತನ ತನು ಶುದ್ಧ ಮನ ಶುದ್ಧ
ಧನ ಶುದ್ಧ, ಸಿದ್ಧ ಪ್ರಸಿದ್ಧ
ಕೂಡಲ ಚೆನ್ನಸಂಗಮದೇವ[೧೫]

ಕಾವಿ ಕಾಷಾಂಭರವ ತೊಟ್ಟವ ಜಂಗಮವೆ?
ಮುರುಹು ಮುದ್ರೆಯನಿಟ್ಟವ ಜಂಗಮವೆ?
ಬರಿಯ ಬೋಳುಗಳೆಲ್ಲ ಜಂಗಮವೆ?
ವೇಷಧಾರಿಗಳೆಲ್ಲ ಜಂಗಮವೆ?
ಅಜ್ಞಾನಿಗಳೆಲ್ಲ ಜಂಗಮವೆ?
ಭೂಭಾರಿಗಳೆಲ್ಲ ಜಂಗಮವೆ? ಅಲ್ಲ
ಜಂಗನು ಮತ್ತೆ(ತೆಂ)ದರೆ
ಸೀಮೆಯಿಲ್ಲದ ನಿಸ್ಸೀಮ ಜಂಗಮ
ಆಸೆಯಿಲ್ಲದ ನಿರಾಸಕ ಜಂಗಮ
ಚಿಂತೆಯಿಲ್ಲದ ನಿಶ್ಚಿಂತ ಜಂಗಮ
ಇಂತಪ್ಪ ಜಂಗಮದ ಸುಳುಹು ಕಾಣದೆ
ಕೂಡಲ ಚೆನ್ನಸಂಗಯ್ಯ ತಾನೇ ಜಂಗಮವಾದ[೧೬]

ಜಂಗಮನೆಂದರೆ "ನೆಡೆದಾಡುವವ" ಎಂದರ್ಥ ಅಂದರೆ ಸಮಾಜದ ಹಿತಕ್ಕಾಗಿ ಎಲ್ಲವನ್ನೂ ತ್ಯಜಿಸಿ ಸನ್ಯಾಸಿಯಾಗಿ ಅಲೆದಾಡುವವನು ಅವನ ಉದ್ದೇಶ ಇಷ್ಟೆ. ಸಮಾಜದ ಹಿತ. ಹೀಗೆ ಎಲ್ಲರ ಹಿತವನ್ನು ಬಯಸುವವನು ಮೊದಲು ತಾನು ಪರಿಶುದ್ಧತೆಯಿಂದ ಕೂಡಿರಬೇಕು ಹಾಗಾದರೆ ಎಂತವನು ಜಂಗಮ? ಎಂಬುದನ್ನು ಈ ಕೆಳಗಿನಂತೆ ನೋಡೋಣ.

ಕೇವಲ ಬಾಹ್ಯರೂಪಕ್ಕೆ ಕಾವಿ ಬಟ್ಟೆ ಧರಿಸಿ ಮೈತುಂಬಾ ವಿಭೂತಿ ಬಳಿದುಕೊಂಡು ರುದ್ರಾಕ್ಷಿ ಮಾಲೆ ಧರಿಸಿ, ಬಾಯಲ್ಲಿ ಪಿಟಿ ಪಿಟಿ ಮಂತ್ರವ ಜಪಿಸುವವರೆಲ್ಲ ಜಂಗಮರಾಗಲು ಸಾಧ್ಯವಿಲ್ಲ. ಕೆಲಸ ಮಾಡದೆ ಸೋಮಾರಿಗಳಾಗಿ ತಿರುಗುವವರೆಲ್ಲ ಜಂಗಮರಲ್ಲ.

ನಿಜವಾದ ಜಂಗಮನಿಗೆ ಮನೆಮಠಗಲಿಲ್ಲ ನಿರ್ದಿಷ್ಟ ಸೀಮೆಯಲ್ಲಿ ಇವು ಆಸೆಯಿಲ್ಲ, ಚಿಂತೆ ಇಲ್ಲ ಹಸಿವಾದರೆ ಭಿಕ್ಷಾನ್ನ ಬೇಡಿ ಪಾಳು ದೇವಾಲಯದಲ್ಲಿ ಮಲಗಿ ಲೋಕದ ಹಿತ ಕಾಯುವವನೆ ಜಂಗಮ. ಅದಕ್ಕಾಗಿ ಚೆನ್ನ ಸಂಗಯ್ಯನೇ ಜಂಗಮನಾದ ಎಂದು ಹೇಳುತ್ತಾರೆ.

**ಅಡಿಟಿಪ್ಪಣಿಗಳು**

೧. ಶಿವಣ್ಣ ಎಸ್.(ಸಂ), ಚೆನ್ನಬಸವಣ್ಣನವರ ವಚನಗಳು, ಬಡಗಿ ಪ್ರಕಾಶನ, ತುಮಕೂರು

೨. ಅದೇ, ಪು.೩

೩. ಅದೇ, ಪು.೩

೪. ಅದೇ, ಪು.೪

೫. ಅದೇ, ಪು.೫

೬. ಅದೇ, ಪು.೫

೭. ಅದೇ, ಪು.೫

೮. ಅದೇ, ಪು.೭

೯. ಅದೇ, ಪು.೭

೧೦. ಅದೇ, ಪು.೧೨

೧೧. ಅದೇ, ಪು.೧೪

೧೨. ಅದೇ, ಪು.೧೫

೧೩. ಅದೇ, ಪು.೧೭

೧೪. ಅದೇ, ಪು.೨೬

೧೫. ಅದೇ, ಪು.೨೯

೧೬. ಅದೇ, ಪು.೪೧

೬

# ವಚನ ಸಂಕಲನ ಸಂಪುಟ ೩ ಮತ್ತು ೪

ಈ ಸಂಕಲನದಲ್ಲಿ ಅಲ್ಲಮ ಪ್ರಭುವಿನ ೧೦೮ ವಚನಗಳು ಮತ್ತು ಶಿವನ ಬಿರುದಾವಳಿ ಸ್ತೋತ್ರದ ೧೧೧ ವಚನಗಳು ಇವೆ. ಅಪ್ರಕಟಿತವಾಗಿರುವ ವಚನಗಳನ್ನು ಇಲ್ಲಿ ಪ್ರಕಟ ಮಾಡಿ ೧ ಸಂಕಲನ ರೂಪಕ್ಕೆ ತಂದಿದ್ದಾರೆ.

ಎಲ್ ಬಸವರಾಜು ಅವರು ಅಲ್ಲಮನ ವಚನ ಚಂದ್ರಿಕೆಯ ಪೀಠಿಕೆಯಲ್ಲಿ "ಬಿರುದಾವಳಿ ಸೋತ್ರದ ವಚನ"ವೆಂಬ ಕೃತಿಯ ಬಗೆಗೆ ಈ ರೀತಿ ಉಲ್ಲೇಖಿಸಿದ್ದಾರೆ. "ಅವಿಂತನೊಬ್ಬನಿಂದ ಸಂಕಲನವಾಗಿರುವ "ಬಿರುದಾವಳೀ ಸೋತ್ರದ ವಚನಗಳು" ಮುಂದೆ ಕ್ರಿ.ಶ.೧೯೬೬ರಲ್ಲಿ ಡಾ.ಎಲ್. ಬಸವರಾಜು ಅವರು "ಅಕ್ಕನ ವಚನಗಳು ಕೃತಿಯನ್ನು ಸಂಪಾದಿಸಿ ಪ್ರಕಟಿಸಿದಾಗ ಅದರ ಪೀಠಿಕೆಯಲ್ಲಿ ಸಂಪಾದನೆ ಸಿದ್ಧವೀರಣಾರ್ಯ 'ಲಿಂಗಸ್ತೋತ್ರದ ವಚನ" ಹಾಗೂ "ಬಿರುದಾವಳಿ ಸ್ತೋತ್ರದ ವಚನ" ಡಾ.ಎಲ್.ಬಸವರಾಜು ಅವರು ತಿಳಿಸಿರುವಂತೆ ಆ ಭಿನ್ನ ಸಂಕಲನ ಕೃತಿಯಾಗಿರದೆ ಭಿನ್ನ ಭಿನ್ನ ವಚನ ಸಂಕೇತಗಳಾಗಿವೆ. "ಲಿಂಗ ಸ್ತೋತ್ರದ ವಚನ"ಗಳನ್ನು ೧೦೮ ವಚನಗಳಿದ್ದು ಮಹಾದೇವಿಯಕ್ಕನ ೧೦ ವಚನಗಳಿವೆ 'ಬಿರುದಾ ಸಂಕಲನದಲ್ಲಿ ೧೧೧ ವಚನಗಳಿದ್ದು ಮಹಾದೇವಿಯಕ್ಕನ ಒಂದು ಒಂದು ವಚನವಿದೆ.

ಸಂ. ಸಿದ್ಧವೀರಣ್ಣೊಡೆಯ ಸಂಕಲಿಸಿದ "ಶಿವನ ಬಿರುದಾವಳಿ ಸೋತ್ರದ ವಚನ"ಗಳನ್ನು ಆಧರಿಸಿ ವೀರಸಂಗಯ್ಯ ತನ್ನ "ಶಿವಮಹಿಮಾ ಸ್ತೋತ್ರದ ವಚನ"ಗಳನ್ನು ಸಂಕಲಿಸಿದ್ದಾನೆ. ವೀರಸಂಗಯ್ಯ ತನ್ನ ಕೃತಿಯ ಆಕರದ ಬಗೆಗೆ ಆದಿಯಲ್ಲಿ ಸಂಪಾದನೆ ಸಿದ್ಧವೀರೇಶ್ವರದೇವರು ಸೇರಿಸಿದ, ಅನುಕ್ರಮದ ವೀರಸಂಗಯ್ಯನವರು ಸಂಗ್ರಹಿಸಿದ "ಶಿವಮಹಿಮಾ ಸ್ತೋತ್ರದ ವಚನ"ಗಳು ಎಂದಿದ್ದಾನೆ. ಈ ಎರಡು ಕೃತಿಗಳಲ್ಲಿ ಉಲ್ಲೇಖವಾಗಿರುವ ೯೩ ವಚನಗಳು ಒಂದೇ ಆಗಿವೆ. ಅಲ್ಲದೆ ೪೦ ವಚನಗಳು ಅಲ್ಲಲ್ಲಿ ಒಂದೇ ಅನುಕ್ರಮದಲ್ಲಿವೆ.

ಪ್ರಭುದೇವರ ಸ್ತೋತ್ರದ ವಚನಗಳು ಸಂಕಲನ ಕೃತಿಯಲ್ಲಿ ೧೦೮ ವಚನಗಳಿವೆ ಕೃತಿಯ ಪ್ರಾರಂಭದಲ್ಲಿ ಸಂಪಾದನೆಯ ಸಿದ್ಧವೀರಣ್ಣೋಷ್ಟೇವರು ಸೇರಿಸಿದ ಪ್ರಭುದೇವರ ಸ್ತೋತ್ರದ ವಚನದೊಂದಿಗೆ

ಅಂತ್ಯದಲ್ಲಿ ಪ್ರಭುದೇವರ ಸ್ತೋತ್ರ ಸಮಾಪ್ತವೆಂದಿದೆ. ಈ ಕೃತಿಯಲ್ಲಿ ೧೪ ವಚನಕಾರ ವಚನಕಾರ್ತಿಯರ ೧೦೮ ವಚನಗಳಿವೆ. ಇಲ್ಲಿನ ೧೦೮ ವಚನಗಳಲ್ಲಿ ೮೯ ವಚನಗಳು ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆಯಲ್ಲಿವೆ. ಕ್ರಮಾಂಕ ೯೦ ಹಾಗೂ ೯೨ಗೆಯ ವಚನಗಳು ಹಲಗೆ ದೇವ ಕೆಂಚವೀರಣ್ಣೊಡೆಯರ ಶೂನ್ಯ ಸಂಪಾದನೆಯಲ್ಲಿದೆ. ಕ್ರಮಾಂಕ ೧೮ ಹಾಗೂ ೨೦ನೆಯ ವಚನಗಳು ಗುಮ್ಮಳಾಪುರದ ಸಿದ್ಧಲಿಂಗದೇವರ "ಶೂನ್ಯ ಸಂಪಾದನೆ"ಯಲ್ಲಿದೆ.

ಪ್ರಭುದೇವರ ಸ್ತೋತ್ರದ ವಚನಗಳನ್ನು ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರು ಸಾವಿರ ಮಠದ ಓಲೆಪ್ರತಿ ಕ್ರಮಾಂಕ ೮೩ ರಿಂದ ಪರಿಷ್ಕರಿಸಿ ಪ್ರಕಟಿಸಲಾಗಿದೆ. "ಶಿವನ ಬಿರುದಾವಳಿ ಸ್ತೋತ್ರರ ವಚನಗಳು ಕೃತಿಯನ್ನು ಪರಿಷ್ಕರಿಸಲು. ೨ ಕಾಗದದ ಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಒಂದು ಕಾಗಟ ಪ್ರತಿಯನ್ನು ಪ್ರೊ.ಎಸ್. ಉಮಾಪತಿ ಅವರು ಒದಗಿಸಿದ್ದಾರೆ. ಈ ಕೃತಿಯ ಆದಿಯಲ್ಲಿ "ಶಿವನ ಬಿರುದಾವಳಿ ಸ್ತೋತ್ರ ಬರುವುದಕ್ಕೆ ಶುಭಮಸ್ತು ಎಂದಿದೆ. ಅನಂತರ ಶ್ರೀ ಗುರು ಮುರಿಗೆಯೋ ನಮಃ ಶ್ರೀ ತೋಂಟದ ಸಿದ್ಧಲಿಂಗಾಯ ನಮಃ ನಿಜಗುಣ ಶಿವಯೋಗಿಯೇ ನಮಃ ಶ್ರೀ ವಿರೂಪಾಕ್ಷಯಯೇ ನಮಃ 'ಶ್ರೀ ಗುರು ಬಸವಲಿಂಗಾಯ ನಮಃ' ಶ್ರೀ ಪ್ರಮಥ ಗಣಾಧೀಶ್ವರರ ಚರಣಾರವಿಂದನೇ ಗತಿ ಮತಿ' ಎಂದಿದೆ. ಅಂತ್ಯದಲ್ಲಿ "ಶಿವನ ಬಿರುದಾವಳಿ ಸ್ತೋತ್ರದ ವಚನಂಗಳು ಸಮಾಪ್ತ ಮಂಗಳ ಮಹಾ' ಎಂದಿದೆ.

ಹರಿಯೆಂಬಾತ ನಿಮ್ಮ ಚರಣವನರೆಯ
ಬ್ರಹ್ಮನೆಂಬಾತ ನಿಮ್ಮ ಮುಕಟವನರೆಯ
ಯತಿವ್ರತಿ ಋಷಿಗಳೆಂಬವರು ನಿಮ್ಮ ಒಳಗ ನೆರೆಯರು
ಸಮಸ್ತ ದೇವರ್ಕಳು ನಿಮ್ಮ ರೋಮದ ಪ್ರಮಾಣವರೆಯರು
ಶತಕೋಟಿ ಸೂರ್ಯರು ನಿಮ್ಮ ಬೆಳೆಗೆ ಕಾಣಲರೆಯರು
ನಾ ನಿಮ್ಮನರೆಯಬಲ್ಲನೇ ಅಯ್ಯ ಪ್ರಭುವೆ
ಕಪಿಲ ಸಿದ್ಧ ಮಲ್ಲಿಕಾರ್ಜುನ'

ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರ ಇವರು ನಿಮ್ಮ ಮಹಿಮೆಯನ್ನು ಅರಿಯಲಿಲ್ಲ. ಹರಿಯೆಂಬುವನು ಪ್ರಭುವಿನ ಪಾದದ ಮಹಿಮೆಯನ್ನು ಅರ್ಥಮಾಡಿಕೊಳ್ಳಲಾಗಲಿಲ್ಲ. ಬ್ರಹ್ಮನು ಪ್ರಭುವಿನ ಮುಖಮಹಿಮೆಯನ್ನು ಅರಿಯಲಿಲ್ಲ. ಶಿವನ ಸ್ವರೂಪರಾದ ಋಷಿಗಳು 'ನಿಮ್ಮ ಅಂತರಂಗವನ್ನು ಅರಿಯಲಾಗಲ್ಲಿಲ್ಲ ಅಂದಾಗ ನರ ಮಾನವನಾದ ನಾವು ನಿಮ್ಮನ್ನು ಅರ್ಥಮಾಡಿಕೊಳ್ಳಲು ಆಗುತ್ತಿಲ್ಲ. ಶತಕೋಟಿ ಸೂರ್ಯ ಇಡೀ ಜಗತ್ತನ್ನೇ ಬೆಳಗುತ್ತಾರೆ. ಅಂತವರಿಂದಲೂ ನಿಮ್ಮ ಮಹಿಮೆಯ್ನನು ತಿಳಿಯಲಾಗಲಿಲ್ಲ.

ಗುರುವಿನ ಮತ್ತು ಯತಿಗಳ ಮನಸ್ಸನ್ನು ಸಾಮಾನ್ಯರಿಂದ ಅರಿಯಲು ಸಾಧ್ಯವಿಲ್ಲ. ಅವರಂತೆ ಸಕಲ ಜ್ಞಾನವನ್ನು ಪಡೆದವರು ಮಾತ್ರ ಅವರನ್ನು ಅರಿಯಲು ಸಾಧ್ಯ ಎಂದು ಅಲ್ಲಮ ಗುಣ ಮಹಿಮೆಯನ್ನು ಕೊಂಡಾಡಿದ್ದಾರೆ.

**ಸಾರಾಂಶ**

"ಶಿವ ಶಿವ ಎಂದರೆ ಭಯವಿಲ್ಲ, ಶಿವನಾಮಕೆ ಸಾಟಿ ಬೇರಿಲ್ಲ" ಎಂಬಂತೆ ಶಿವನ ಸ್ವರೂಪಿಯಾದ ಅಲ್ಲಮಪ್ರಭುವಿನ ನಾಮಸ್ಮರಣೆಯನ್ನು ಮಾಡಿದರೆ ಎಲ್ಲಾ ಕಷ್ಟಗಳು ಪರಿಹಾರವಾಗುತ್ತವೆ. ಅಲ್ಲಮನನ್ನು ಭವರೋಗ ವೈದ್ಯನಿಗೆ ಹೋಲಿಸಲಾಗಿದೆ. ಅಂದರೆ ಸಕಲ ರೋಗಗಳನ್ನು ನಿವಾರಿಸುವವನು. ನೀನೆ ಎಂಬುದನ್ನು ಇದರಿಂದ ಅರಿಯಬಹುದು. ಭಕ್ತಿಯಿಂದ ಪೂಜಿಸಿದರೆ ಕೇಳಿದ್ದನ್ನು ದಯಪಾಲಿಸುವ ದಯಾ ಸಾಗರ ನೀನು. ಅಂತಹ ಭಕ್ತಿಯನ್ನು ನನ್ನಲ್ಲಿ ನೆಲೆಗೊಳ್ಳುವಂತೆ ಮಾಡು ಎಂದು ಕೇಳಿಕೊಳ್ಳುತ್ತಾಗೆ. ಅನವರತ ನಿಮ್ಮ ಪಾದ ಸೇವೆಯನು ಮಾಡುತ್ತಾ ನಿಮಗೆ ನಮಸ್ಕರಿಸುವೆ ಎಂದು ಹೇಳುತ್ತಾರೆ.

ಭವರೋಗವೈದ್ಯನೆಂದು ನಂಬಿದೆ ನಾನು
ಒಮ್ಮಿಗೆ ಕರುಣಿಸಯ್ಯ ಪ್ರಭುವೆ
ಭಕ್ತಿ ಫಲದಾಯಕ ನೀನು
ಒಮ್ಮಿಗೆ ಕರುಣಿಸಯ್ಯ ಪ್ರಭುವೆ
ಜಯ ಜಯ ಶ್ರೀ ಮಹಾದೇವಾಯೆನುತಿತರ್ದೆನು ಪ್ರಭುವೆ
ಕೂಡಲ ಸಂಗಮದೇವಯ್ಯ
ನಿಮ್ಮ ಶ್ರೀಪಾದಕ್ಕೆ
ನಮೋ ನಮೋಯೆನುತಿರ್ದೆನಯ್ಯ ಪ್ರಭುವೆ[5]

ಎನ್ನ ಶಿರ ನಿಮ್ಮ ಚರಣವ ಒರಸೊರಸಿ ಬೆರಸಿ ಭೇದವಿಲ್ಲಯ್ಯ ಪ್ರಭುವೆ
ಎನ್ನ ಕಾಯದ ಕಪಟ
ಎನ್ನ ಮನದ ವಿಕಾರ
ನಿಮ್ಮ ಅಂಗುಷ್ಟದ ಮೊಗೆಯ ಸೋಂಕಲೊಡನೆ
ಹರೆದುದು ನೋಡಯ್ಯ ಪ್ರಭುವೆ ಕೂಡಲ ಸಂಗಮ ದೇವಾ
ನಿಮ್ಮ ಶ್ರೀ ವಾದದರ ಬೆಳಗ ಕಂಡು
ಎನ್ನ ಅಂತರಂಗದ ಕತ್ತಲೆ ಓಡಿತ್ತಯ್ಯ ಪ್ರಭುವೆ[6]

**ಸಾರಾಂಶ**

ಅಲ್ಲಮಪ್ರಭುವಿನ ವಾದದ ಮಹಿಮೆಯನ್ನು ಕುರಿತು ಈ ಮೇಲಿನ ವಚನದಲ್ಲಿ ತಿಳಿಸಲಾಗಿದೆ. ಬಲ್ಲದ್ದು ಬಾಗುತ್ತದೆ. ಅಂದರೆ ತಿಳಿದವರು ವಿಚಾರವಂಥರಿಗೆ ಗೌರವ ನೀಡುತ್ತಾರೆ. ಗುರುವೇ ನನ್ನ ಮನದ ಅಜ್ಞಾನವನ್ನು ಹೋಗಲಾಡಿಸಿ ನನ್ನ ಚಿತ್ತ ನಿಮ್ಮತ್ತ ಹರಿಯುವಂತೆ ಮಾಡಯ್ಯ ಎಂದು ನಿಮ್ಮ ಪಾದಕ್ಕೆ ಎರಗಿದರೆ ಯಾವ ತಪ್ಪು ಆಗುವುದಿಲ್ಲ. ಇದರಿಂದ ನನ್ನ ದೇಹದ ದಂಡನೆಯಾಗುತ್ತದೆ. ಮತ್ತು ದೇಹದ ಮೋಸವು ಬಯಲಾಗುತ್ತದೆ.

ನನ್ನ ಮನಸ್ಸಿನ ಚಿತ್ರ ವಿಚಿತ್ರವಾದ ಆಸೆ ಆಕಾಂಕ್ಷೆಗಳು ನನ್ನನ್ನು ದಾರಿ ತಪ್ಪುವಂತೆ ಮಾಡಿದರೂ ಸಹ ನಿಮ್ಮ ಅನುಗ್ರಹವಿದ್ದರೆ ಅದು ಹಿಡಿತದಲ್ಲಿರುತ್ತದೆ. ಅದಕ್ಕಾಗಿಯೇ ಭಕ್ತರು ಹೇಳುತ್ತಾರೆ. ನಿಮ್ಮ ಪಾದದ ಒಂದು ಹೆಬ್ಬೆರಳು ತಾಗಿದ್ದರೆ ಸಾಕು ಮನದ ವಿಕಾರ ತಪ್ಪುತ್ತದೆ ಎಂದು ಹೇಳುತ್ತಾರೆ. ನಿಮ್ಮ ಪಾದದ ಬೆಳಕಿನಿಂದ ನನ್ನ ಅಂತರಂಗದಲ್ಲಿ ಅಡಗಿರುವಂತಹ. ಕತ್ತಲೆಂಬ ಅಜ್ಞಾನ ಹೋಗಿ ಜ್ಞಾನದ ಪ್ರಕಾಶ ಬೆಳಗುತ್ತದೆ ಎಂದು ಹೇಳುತ್ತಾರೆ.

**ಸಾರಾಂಶ**

ಆದಿ ಅಂತ್ಯವೆಂಬುದು ಭಗವಂತನಿಗಿಲ್ಲ. ನಾವು ಏತಕ್ಕಾಗಿ ಈ ಭೂಮಿ ಮೇಲೆ ಜನಿಸಿದ್ದೇವೆ. ನಮ್ಮ ಅಂತ್ಯದ ಕ್ಷಣ ಹೇಗಿರುತ್ತದೆ ಎಂಬುದನ್ನು ತಿಳಿಸಿ ಕೊಟ್ಟವನು ನೀನು. ಅದಕ್ಕಾಗಿ ದೈವ ಸ್ವರೂಪಿಯಾದ ನೀನು ಆದಿ ಅನಾದಿಯನ್ನು ತೊರೆದೆ ಎಂದು ಹೇಳಿದ್ದಾರೆ. ಇಹವ ಅಂದರೆ ನಾವಿರುವ ಈಗಿನ ಪ್ರಪಂಚ ಇದು ಕೇವಲ ನಾಲ್ಕು ದಿನದ ಸಂತೆ ಅದಕ್ಕಾಗಿ ನಾನು, ನನ್ನದು, ನನ್ನಿಂದಲೇ ಎಂಬ ಅಹಂಕಾರ ಬಿಡಬೇಕು. ಇಲ್ಲಿರುವುದು ನಾವು ಕೇವಲ ಕ್ಷಣ ಕಾಲ ಮಾತ್ರ ಎಂದು ಇಹವ ಕೆಡಿಸಿದ. ಪರವನ್ನು ನಿಲ್ಲಿಸುತ್ತಾನೆ. ಅಂದರೆ ನಾವು ಅಳಿದಾಗ ನಮ್ಮನ್ನು ಸ್ಮರಿಸಬೇಕು. ಆ ಪರದಲ್ಲಿ ಕೂಡ ನಮಗೊಂದು ಸ್ಥಾನ ಸಿಗಬೇಕು. ಆ ರೀತಿ ಬದುಕಬೇಕು ಎನ್ನುತ್ತಾನೆ.

ನಾನು ಎಂಬ ಕೀರ್ತಿಯ ಬೆಟ್ಟವನ್ನು ಹತ್ತಬೇಡ. ಅದರಿಂದ ನಿನ್ನ ಮನಸ್ಸಿಗೆ ಎಂದೂ ಶಾಂತಿ ಇಲ್ಲ. ಹಿಂದಿನ ಕರ್ಮಗಳನ್ನು ಮರೆತು ಮುಂದಿನ ಭವಿಷ್ಯದ ಬಗ್ಗೆ ತಲೆಕಡೆಸಿಕೊಳ್ಳದೆ, ಈಗ ಪ್ರಸ್ತುತದಲ್ಲಿಯೇ ನೀತಿಯುಕ್ತವಾಗಿ ಬದುಕು ಪ್ರಭುವಿನ ಪಾದಗಳಿಗೆ ಎರಗಿ ಮುಕ್ತಿಯ ಪಡೆಯಿರಿ ಎಂದು ಹೇಳುತ್ತಾರೆ.

ಆದಿಯನರುಹಿದ ಅನಾದಿಯ ತೋರೆದ ಪ್ರಭುದೇವರು
ಇಹದ ಕೆಡಿಸಿ - ಪರವ ನಿಲ್ಲಿಸಿದ ಪ್ರಭುದೇವರು
ಘನವ ತೋರುದು - ಮನವ ಸಂತವಿಟ್ಟ ಪ್ರಭದೇವರು

ಅನುವ ತೋರು ಆಯತವ ಮಾಡಿ
ತನುವ ಮರೆಸಿ ಮಹವನರುಪಿದ ಪ್ರಭದೇವರು
ಹಿಂದಣ ಪೂರ್ವಶ್ರಯದ ಹಿಂದಕ್ಕೆ ತೋರು
ಮುಂದಣ ಗತಿಯ ಸಂದೇಹವಂ ಬಿಡಿಸಿದ ಪ್ರಭುದೇವರು,
ಕೂಡಲ ಸಂಗಮ ದೇವರಲ್ಲಿ
ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋಯೆನುತಿದೆನೋ"

ಲಿಂಗ ಜಂಗಮ ಜಂಗಮ ಲಿಂಗವೆಂಬುದನೆನಗೆ
ತೋರಿದವರಾರಯ್ಯ ಪ್ರಭುವೇ ನೀವಲ್ಲವೆ?
ಲಿಂಗವ ಪೂಜಿಸಿದರೆ ಭವ ಹರೆಯದೆಂದು
ಜಂಗಮ ಮುಖ ಲಿಂಗವಾಗಿ ಬಂದು ಶಿಕ್ಷಿಸಿ ರಕ್ಷಿಸಿ
ಎನ್ನ ಆದಿ ಅನಾದಿಯ ತೋರ
ಪ್ರಾಣಲಿಂಗ ಜಂಗಮವೆಂದು
ಎನಗೆ ಪ್ರತಿಷ್ಠಾಪಿಸಿ ತೋರಿದಿರಾಗಿ
ಕೂಡಲ ಸಂಗಮದೇವಾ
ನಿಮ್ಮಿಂದಲಾನು ಬದುಕಿದೆನು ಕಾಣಾ ಪ್ರಭುವೆ"

ನಿಜ ಭಕ್ತನಿಗೆ ಕಲ್ಲಿನಲ್ಲೂ ದೇವರ ರೂಪ ಕಾಣುತ್ತದೆ. ಆದರೆ ಅವನಿಗೆ ಆ ಕಲ್ಲೇ ಆರಾಧ್ಯದೈವ. ಅದಕ್ಕಾಗಿ ಇಲ್ಲಿ ಲಿಂಗವೇ ಜಂಗಮ, ಜಂಗಮನೇ ಲಿಂಗವಾಗಿ ಕಾಣುತ್ತದೆ. ಲಿಂಗದಲ್ಲಿ ಜಂಗಮನ ಕಾಣುವಂತೆ ಮಾಡಿದವರು ಯಾರು? ನೀವೆ ತಾನೇ ಪ್ರಭುವೆ ಎಂದು ಭಕ್ತ ಹೇಳುತ್ತಾನೆ. ಲಿಂಗವ ಪೂಜಿಸಿದರೆ ನಮ್ಮ ಭವಂಗಳು ಕೆಡುತ್ತವೆ. ಜಂಗಮ ಮುಖ ಲಿಂಗದ ರೂಪವಾಗಿ ಕಾಣುತ್ತದೆ. ನಮ್ಮನ್ನು ಕಾಯುವದೋ ಅದೇ ಕಳೆಯುವದೂ ಅದೇ. ನಾನು ಇಲ್ಲಿ ಏಕೆ ಜನಿಸಿಬಂದೆ? ಬಂದ ಕಾರಣವೇನು? ಅಂತ್ಯದಿಂದ ನಾನೇನು ಕಲಿಯಬಲ್ಲೆ ಎಂಬುದನ್ನು ಕಲಿಸುತ್ತದೆ. ನನ್ನ ಪ್ರಾಣ ಲಿಂಗವೇ ಜಂಗಮನೆಂದು ತೋರಿಸಿಕೊಟ್ಟ ಪ್ರಭುವೇ, ನಿಮ್ಮಿಂದ ನಾನು ಬದುಕಿದೆನು. ಎನ್ನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಯ್ಯ ಎನ್ನುತ್ತದೆ.

**ಸಾರಾಂಶ**

ಮಾಹೆ ಅಲ್ಲಮನಲ್ಲಿ ಮೋಹಗೊಂಡು ನನ್ನನ್ನು ವರಿಸು ಎಂದಾಗ. ಅದಕ್ಕೆ ಆಸೆ ಪಡದೆ, ಅವಳಿಗೆ "ಮಳೆಗೆ ನೆನೆವುದೇ ಗಾಳಿ" ಎಂಬ ಮಾರ್ಮಿಕ ಉತ್ತರಗಳನ್ನು ನೀಡುವುದರ ಮೂಲಕ ಅವಳನ್ನು ಸೋಲಿಸಿದನು. ಅಲ್ಲಮನು ಎಂತಹ ಗುಣವಂತನು ಎಂಬುದನ್ನು ಈ ವಚನದಿಂದ ತಿಳಿಯಬಹುದು.

ಇಡೀ ವಿಶ್ವವೇ ಹೆಣ್ಣು, ಮಣ್ಣು, ಹೊನ್ನ ಈ ಮೂರಕ್ಕೆ ಸೋತಿರುವಾಗ ಅಲ್ಲಮನು ಇವ್ಯಾವಕ್ಕೂ ಬಗ್ಗಲಿಲ್ಲ ಬಂಗಾರದ ಆಸೆಯಿಲ್ಲ ಪ್ರಭುವಿಗೆ ಏಕೆಂದರೆ ತನ್ನಲ್ಲಿರುವುದನ್ನೇ ತ್ಯಜಿಸಿದ್ದಾನೆ. ಸ್ತ್ರೀಲೋಲನಲ್ಲ, ಅದಕ್ಕೆ ಮೇಲಿನ ಉದಾಹರಣೆಯೇ ಸಾಕ್ಷಿ. ಮಣ್ಣಿನ ಆಸೆಗೆ ಮೊದಲೇ ಬಂದನಲ್ಲ ಏಕೆಂದರೆ ಅಲೆದಾಡುವ ಸನ್ಯಾಸಿ, ಅವನು ಊಟ ಬಟ್ಟೆಯ ವ್ಯಾಮೋಹವಿಲ್ಲ. ಭಿಕ್ಷಾನ್ನವೇ ಆಹಾರ ಒಂದು ತುಂಡು ಬಟ್ಟೆಯೇ ಮಾನ ಮುಚ್ಚುವ ಹೊದಿಕೆ. ಇದರಂತೆ ನಮ್ಮನ್ನು ಇರಿಸಲೆಂದು ಭೂಮಿಗೆ ಬಂದ ಮಹಾ ಶರಣನಿವನು. ಇಂತಹ ಪ್ರಭುವಿನ ಗುಣಗಳನ್ನು ನಾವು ಅಳವಡಿಸಿಕೊಳ್ಳಬೇಕು.

ಹೊನ್ನಿಂಗೆಂದು ಬಂದಾತನಲ್ಲ ಪ್ರಭುದೇವರು
ಹೆಣ್ಣಿಗೆಂದು ಬಂದಾತನಲ್ಲ ಪ್ರಭುದೇವರು
ಮಣ್ಣಿಗೆಂದು ಬಂದಾತನಲ್ಲ ಪ್ರಭುದೇವರು
ಅನ್ನಕ್ಕೆಂದು ಬಂದಾತನಲ್ಲ ಪ್ರಭುದೇವರು
ವ್ಯಸನಕ್ಕೆಂದು ಬಂದಾತನಲ್ಲ ಪ್ರಭುದೇವರು
ಎನ್ನ ಆಗು ಮಾಡ ಬಂದ ಅನುಪಮನು
ಕೂಡಲ ಸಂಗಮದೇವರ ಮಹಾ ಬೆಳಗಿನೊಳಗೆ
ಇಂಬಿಡ ಬಂದನಯ್ಯ ಪ್ರಭುದೇವರು[೬]

ಇಲ್ಲದ ಸಂಸಾರ ಕಣ್ಣಮುಂದೆ ರೂಪಾಗಿ ಕಾಡುತ್ತಿದೆ
ಸುಜ್ಞಾನವೆಂಬ ಅಂಜನವನಚ್ಚಲು
ಸಕಲ ಭ್ರಮೆಯೆಂಬ ಕತ್ತಲೆಯ ಕಳೆದು
ನಿಜಲಿಂಗ ಸಂಬಂಧವ ನೆಲೆಗೊಳಿಸಿ
ನಿತ್ಯದಲ್ಲಿ ಅಚ್ಚೊತ್ತಿದನಾಗಿ
ಕೂಡಲ ಚೆನ್ನ ಸಂಗಯ್ಯನಲ್ಲಿ
ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು[೭]

ಸಂಸಾರವೆಂಬುದು ಒಂದು ಮಾಹೆ. "ಅದರಕ್ಕೆ ಸಿಹಿ ಉದರಕ್ಕೆ ಕಹಿ" ಸಂಸಾರದ ಸವಿಯನುಂಡ ಮೇಲೆ ಪಾರಮಾರ್ಥದ ನೆನಪು ಮೂಡುತ್ತದೆ. ಮೊದಲು ಸಂಸಾರವೆಂದರೆ ಮಾನವರಿಗೆ ಬಹುಖುಷಿ ಅದರಲ್ಲಿ ಎಳ್ಳಷ್ಟೂ ಸುಖವಿಲ್ಲ. ನಿನಗೆ ಕಡುಕಷ್ಟ ಬಂದಾಗ ಯಾವ ನಿನ್ನ ಸಂಬಂಧಿಕನೂ ನಿನ್ನ ನೆರವಿಗೆ ಬಾರ, ಬರುವವನು ಒಬ್ಬನೇ ಆ ದೇವರು. ಅದಕ್ಕಾಗಿ ಸಂಸಾರವೆಂಬ ಮಂಕುಬಡಿದವನಿಗೆ. ಸುಜ್ಞಾನವೆಂಬ ಕಾಡಿಗೆ ಹಚ್ಚಿ, ಸಂಸಾರವೆಂಬ ಕ್ಷಣಿಕ ಸುಖದ ಭ್ರಮೆಯನ್ನು ಹೋಗಲಾಡಿಸಿ. ಪರ ಅರಿಯುವಂತೆ ಮಾಡುಬೇಕು. ಆಗ ಲಿಂಗ ಸಂಬಂಧದ ನಿತ್ಯದ ಆನಂದವನುಂಡು ಪ್ರಭುದೇವರ ಪಾದಕ್ಕೆ ಎರಗಿ ಮುಕ್ತಿಯ ಪಡಿಯಿರಯ್ಯ ಎನ್ನುತ್ತಾರೆ.

## ಸಾರಾಂಶ

ಶರಣರಿಗೆ, ಯೋಗಿಗಳಿಗೆ ಒಂದು ನಿರ್ದಿಷ್ಟವಾದ ಸ್ಥಳ, ಸಂಸಾರದ ಚಿಂತೆ ಯಾವುದೂ ಇಲ್ಲ. ಶರಣರ ವರ್ತನೆಯನ್ನು ತಿಳಿಯುವುದು ಬಹಳ ಕಠಿಣದ ಕೆಲಸ. ಇವರು ಸದಾ ಲೋಕಸಂಚಾರಿಗಳು. ಲೋಕದ ಆಚಾರವಿಲ್ಲದವ ನಮ್ಮ ಅಲ್ಲಮ ಪ್ರಭು. ಇವರು ಹೊಗಳಿಕೆಗೆ ಗರ್ವಪಡುವವರಲ್ಲ. ಏಕೆಂದರೆ ಅವರಿಗೆ ಕೀರ್ತಿಯ ವಿಚಾರವೇ ಬೇಕಿಲ್ಲ. ಅವರನ್ನು ಜನರು ನಿಂದಿಸಿದರೂ ಸಹ ಅವರ ಬಗ್ಗೆ ತುಂಬಾ ತಾಳ್ಮೆಯಿಂದ ನಡೆದುಕೊಳ್ಳುತ್ತಾರೆ ಎಲ್ಲವನ್ನೂ ಕಳೆದುಕೊಂಡ ಇವರಿಗೆ ಹಣ ಕೊಡಿಡುವ ಅವಶ್ಯಕತೆಯೇ ಇಲ್ಲ. ಹಣ ಇದ್ದಾಗ ಮಾತ್ರ ಕಳ್ಳತನದ, ಪ್ರಾಣದ ಭಯವಿರುತ್ತದೆ. ಹಣವೇ ಇಲ್ಲವೆಂದಾಗ ಆಪತ್ತಿನ ಭಯವೇ ಇಲ್ಲ. ಇವರು ಯಾರಿಗೂ ಮಿತ್ರರೂ ಅಲ್ಲ, ಯಾರಿಗೂ ಶತ್ರುಗಳೂ ಅಲ್ಲ. ಊರು ಊರು ಅಲೆದರೂ ಸಹ ಇವರಿಗೆ ಯಾವ ಸೂತಕ, ಮೈಲಿಗೆ ಆಗದು. ಯಾವ ಊರಿನಲ್ಲಿ ಉಳಿದುಕೊಂಡರೂ ಸಹ ಸಂಬಂಧಿಕರು ಇಲ್ಲ ಏಕೆಂದರೆ ಇವರು ವಿರಾಗಿಗಳು.

ಲೋಕಚಾರಿಯಲ್ಲದ ಶರಣ ಪ್ರಭುದೇವರು
ಸ್ತುತಿ ನಿಂದೆಯಿಲ್ಲದ ಶರಣ ಪ್ರಭುದೇವರು
ಸಂಪತ್ತು ಆಪತ್ತುಗಳಿಲ್ಲದ ಶರಣ ಪ್ರಭುದೇವರು
ಶತ್ರು ಮಿತ್ರುಗಳಿಲ್ಲದ ಶರಣ ಪ್ರಭುದೇವರು
ಸುಳಿದು ಸೂತಕಿಯಲ್ಲ ನಿಂದು ಬಂಧಕನಲ್ಲ
ಕಲಿದೇವಯ್ಯ ನಿಮ್ಮ ಶರಣ ಪ್ರಭುದೇವರು[೮]

## ಶಿವನ ಬಿರುದಾವಳಿಯ ಸ್ತೋತ್ರದ ವಚನಗಳು

ಇದರಲ್ಲಿ ಶಿವನ ಮಹಿಮೆ ಮತ್ತು ಶಿವನನ್ನು ಕುರಿತು ಸ್ತುತಿಸುವ ವಚನಗಳನ್ನು ಕಾಣಬಹುದು.

ಆದಿ ಮುಕ್ತನು ಅನಾದಿ ಮುಕ್ತನು
ನಾದ ಬಿಂದುಕಳಾತೀತನು
ಬೋರಿಸಬಾರದ ಭೇದ್ಯನ ಪ್ರಮಾಣನು
ವೇದಶಾಸ್ತ್ರ ಆಗಮಪುರಾಣಗಳರಸಿ ಕಾಣದ
ಅನಾದಿ ಪುರುಷನು ಸ್ವಯಂ ಪ್ರಕಾಶ ಸ್ವತಃ ಸಿದ್ಧನ
ಎಂತವರಯ್ಯ ಸ್ವಾನುಭಾವ ಸಿದ್ಧರಲ್ಲದವರು?
ಹಲವನೋದಿ ಓದಿ ಕೇಳಿ ಹೇಳಿ
ಹಲಬರೆಲ್ಲ ಹೊಲಬುದಪ್ಪಿ ಕೆಟ್ಟರು
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ

ಪ್ರಸಾದವಿಲ್ಲದವರೆಲ್ಲರು

ಶಿವನ ನಿಜವನರಿಯದೆ ಭ್ರಾಂತರಾದರು'

ಶಿವನಿಗೆ ಆದಿಯಲ್ಲ ಅನಾದಿಯಿಲ್ಲ ಹುಟ್ಟು ಸಾವು ಎರಡನ್ನೂ ಗೆದ್ದವನು ಶಿವ. ನಾದಪ್ರಿಯ ಇಡೀ ಲೋಕವೇ ಒಂದು ಬಿಂದುವಿದ್ದಂತೆ. ಅದರ ತುಂಬಾ ಈತ ವ್ಯಾಪಿಸಿರುವನು. ಕಣ್ಣಿಗೆ ಕಾಣದಷ್ಟು, ವಿಭಜನೆ ಮಾಡದಷ್ಟು ಅಣುವಿನ ರೂಪದಲ್ಲಿರುವವನು. ಈ ಶಿವನು ಸಕಲವನ್ನೂ ಆವರಿಸಿರುವನು. ವೇದ, ಪುರಾಣ, ಆಗಮಗಳನ್ನೆಲ್ಲ ಅರಿತವನು. ಈತ ಸ್ವಯಂ ಪ್ರಕಾಶಿತನು ಇಡೀ ವಿಶ್ವಕ್ಕೆ ಬೆಳಕು ನೀಡುವ ಸೂರ್ಯನಿದ್ದಂತೆ. ಈತ ಕಣ್ಣು ಮುಚ್ಚಿದರೆ ಇಡೀ ವಿಶ್ವಕ್ಕೆ ಕತ್ತಲಾಗುತ್ತದೆ. ಕಣ್ಣು ತೆರೆದರೆ ಇಡೀ ವಿಶ್ವವೇ ಬೆಳಕಾಗುತ್ತದೆ. ಶಿವ ಮಹಿಮೆಯನ್ನು ಅರಿತು ಅವರ ಪ್ರಸಾದವನ್ನು ಪಡೆದವರು ಮಾತ್ರ ಅವರ ಕೃಪೆಗೆ ಪಾತ್ರರಾಗಲು ಸಾಧ್ಯ.

**ಸಾರಾಂಶ**

ಸಾಮಾನ್ಯವಾಗಿ ಈ ನರಲೋಕದಲ್ಲಿ ಹುಟ್ಟುವ ನಾವೆಲ್ಲರೂ ನೈಸರ್ಗಿಕ ಕೊಡುಗೆಯಂತೆ ತಂದೆ ತಾಯಿಯರ ಅಥವಾ ಗಂಡು ಹೆಣ್ಣುಗಳ ಮಿಲನದಿಂದ ಇನ್ನೊಂದು ಜೀವಿ ಸೃಷ್ಟಿಯಾಗುತ್ತದೆ. ಆದರೆ ದೇವರ ಸೃಷ್ಟಿ ಮಾತ್ರ ಮಾನವನ ಕಲ್ಪನೆಗೆ ಮೀರಿದ್ದು, ಶಿವನು ಈ ರೀತಿ ತಂದೆ ತಾಯಿ ಮಿಲನದಿಂದ ಜನಿಸಿದವನಲ್ಲ. ಪವಾಡ ಸಂಭೂತ ಇವನಿಗೆ ಇಂತದ್ದೇ ಎಂಬ ಬಣ್ಣವಿಲ್ಲ. ಬಿಳಿ, ಹಳದಿ, ಹಸಿರು, ಕಪ್ಪು ಈ ಆರು ಬಣ್ಣಗಳನ್ನು ಹೊಂದಿದ್ದಾರೆ.

ಆದಿ ಅಂತ್ಯ ಇಲ್ಲದವನು, ಸ್ವತಂತ್ರ ಮಹಿಮಾ ರೂಪನು ವೇದ ಹೀಗೆಯೇ ಇತ್ತು ಎಂದು ಗುರುತಿಸಿದವನು. ಎಲ್ಲವನ್ನು ನಾ ಬಲ್ಲೆ ಎಂಬ ಅಹಂಕಾರಗಳಿಗೆ ಬುದ್ಧಿ ಕಲಿಸುವವನು. ನಮ್ಮ ವಿಶ್ವನಾಥನು ಎಂದು ಸ್ತುತಿಸಿದ್ದಾರೆ.

ತಂದೆ ತಾಯಿ ಸಂಯೋಗ ಸಂಬಂಧ ಸಂಭೂತನಲ್ಲದವನು
ಶ್ವೇತ ಪೀತ ಕಪೋತ ಹರಿತ ಕೃಷ್ಣ ಮಂಜಿಷ್ಮವೆಂಬ ಷಡುವಣ ರಹಿತನು
ಆದಿಮಧ್ಯಾವಸಾನಸಂಗಳಿಲ್ಲದ ಸ್ವತಂತ್ರ ಮಹಿಮನು
ವೇದವಿಂತುಟೆಂದು ರೂಹಿಸಬಾರದವನು
ನಾ ಬಲ್ಲೆನೆಂಬ ಹಿರಿಯರ ಬಗ್ಗೇಣ ಮಿಕ್ಕಪ್ಪ
ಉರಿಲಿಂಗ ಪೆದ್ದಪ್ರಿಯ ವಿಶ್ವೇಶ್ವರ''

ಪು-೪೭, ವ-೧೪

ಕನಕಗಿರಿನಿವಾಸಂ ಕಾಮನಾಶಂ ಕಮಲವೈರಿ ಭೂಷಂ
ವಿನುತನಾಮಧೇಯಂ ಅನುಪಮಾನತಾರನಾದಂ

ಪರಮವೀರಶೈವ ಭಕ್ತಿ ಭಾವಂ ಜನಿತಪುಣ್ಯ ಕಾಯಂ
ಭವರೋಗ ವೈದ್ಯಂ ಭವಹರಂ
ಹರಹಾರ ಶಿವ ಶಿವಾ ಜಯ ಜಯ ಜಯತು
ಶರಣು ಕರುಣಾಕರ ತ್ರಾಹಿಮಾಂ ಭಕ್ತವತ್ಸಲ
ಮತ್ಪ್ರಾಣನಾಥ ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ[೧೧]

ಬಂಗಾರ ಬೆಟ್ಟದೊಡೆಯ ಹಿಮಗಿರಿಯ ನಿವಾಸ ಶಿವ ಕೈಲಾಸ ಪರ್ವತದಲ್ಲಿ ವಾಸ ಮಾಡುವವನೆ. ಇಡೀ ಲೋಕದ ಜನರೇ ನಿಮ್ಮ ನಾಮವನ್ನು ದಿನ ನಿತ್ಯ ಕೊಂಡಾಡುತ್ತಾರೆ. ಮಾನವನನ್ನು ಕೆಟ್ಟದಾರಿಗೆ ಕೊಂಡೋಯ್ಯುವ ಕಾಮನನ್ನು ಹರಣ ಮಾಡಿದವನು. ಚಂದ್ರನನ್ನು ತಲೆಯಲ್ಲಿ ಧರಿಸಿದ್ದರಿಂದ ಚಂದ್ರಶೇಖರನಾದವನು, ವೀರಶೈವ ಧರ್ಮದಲ್ಲಿ ಜನಿಸಿ ಭಕ್ತಿ ಭಾವದಿಂದ ಪುಣ್ಯ ಪುರುಷನಾದವನೆ, ಸರ್ವಜನರ ಸಕಲ ರೋಗಗಳನ್ನು ನಿವಾರಿಸುವವನು ಶಿವ. ಶರಣು ಎಂದು ಬಂದವರನ್ನು ಅನವರತ ಕಾಪಾಡಿ ಅವರನ್ನು ರಕ್ಷಿಸುವವನೆ ನಿನಗೆ ನಮೋ ನಮೋ.

**ಸಾರಾಂಶ**

ಶಿವನು ಹಲವಾರು ರೂಪಗಳಲ್ಲಿ ರಾಕ್ಷಸರ ಸಂಹಾರ ಮಾಡಿದ್ದಾನೆ. ಅಂತಹ ರೂಪವನ್ನು ಕಂಡ ನಾವು ಆತನನ್ನು ಯಾವ ರೀತಿ ಹೊಗಳುತ್ತೇವೆ ಎಂದು ಈ ಕೆಳಗಿನ ವಚನದಿಂದ ತಿಳಿಯಬಹುದು. ಶಿವನು ವೀರಭದ್ರನ ರೂಪವನ್ನು ಧರಿಸಿ ರಾಕ್ಷಸನನ್ನು ಸಂಹರಿಸಿದ. ಆಗ ರುಂಡ ಮಾಲಾಧರನಾಗಿದ್ದ ಅಂದರೆ ತಲೆ ಬುರುಡೆಯನ್ನು ಹೂ ಮಾಲೆ ಮಾಡಿ ಧರಿಸಿಕೊಂಡವನು. ಅಂತಹ ರೌದ್ರಮಯ ರೂಪವನ್ನು ಕಂಡ ಜನ ಈತನು ದುಷ್ಟಾಸಂಹಾರಕ, ಇಡೀ ದೇವಗಣಕ್ಕೆ ಅಧಿಪತಿ. ಈ ನೆಲಕ್ಕೆ ಒಡೆಯ. ಎಂದು ಹಾಡಿ ಹೋಗಳುತ್ತಾ ಹರುಷದಿಂದ ಹಾಡಿ ಕೊಂಡಾಡಿದನು. ನಮ್ಮ ಬಸವಣ್ಣ ಎಂಬುದು ಈ ವಚನದ ಸಾರಾಂಶ.

ಹರನ ಕೊರಳಲಿಪ್ಪ ಕರೋಟಿ ಮಾಲೆಯ
ಶಿರದ ಲಿಖಿತವ ಕಂಡು ಮರುಳು ತಂಡಗಳು ಓದಿ ನೋಡಿ
ಇವನಜ ಇವ ಹರಿ, ಇವ ಸುರಪತಿ
ಇವ ಧರಣೇಂದ್ರ ಇವನಂತಕನೆಂದು
ಹರುಷದಿಂದ ಸರಸವಾಡುತ್ತ ಕಂಡು
ಹರ ಮುಕುಳಿತನಾಗಿ ನಸು ನಕ್ಕನು
ನಮ್ಮ ಕೂಡಲ ಸಂಗಮ ದೇವ.[೨೨]

ಸ್ವಾಮಿ ನೀನು ಶಾಶ್ವತ ನೀನು
ಎತ್ತಿದೆ ಬಿರುದು ಜಗವೆಲ್ಲರೆಯಲು
ಮಹಾದೇವ ಮಹಾದೇವ ಮಹಾದೇವ
ಇಲ್ಲಿಂದ ಮೇಲೆ ಶಬ್ಧವಿಲ್ಲ
ಪಶುಪತಿ ಜಗಕ್ಕೆ ಏಕೋದೇವ
ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೇ ದೇವ ಕೂಡಲ ಸಂಗಮದೇವ[೨೨]

ಶಿವನೆಂಬುದೆ ಸತ್ಯ ಶಿವನೆಂಬುದೆ ನಿತ್ಯ ಶಿವನೇ ನೀನು ಅಮರ ಏಕೆಂದರೆ ನಿನಗೆ ನಾಮವೆಂಬುದಿಲ್ಲ. ನಿನ್ನ ರೂಪವನ್ನು ನೋಡದಿದ್ದರೂ ಸಹ ನೀನಿರುವ ಸತ್ಯವನ್ನು ಕಂಡು ಕೊಂಡಿದ್ದೇವೆ. ಬೀಸುವ ಗಾಳಿ, ನೀರು ಬೆಂಕಿ ಎಲ್ಲ ನಿಮ್ಮ ಕೃಪೆ. ನಿಮ್ಮನಾಮ ಇಡೀ ವಿಶ್ವದ ತುಂಬಹರಡಿದೆ. ನಿಮಗೆ ನೂರು ನಾಮಗಳಿವೆ. ನಿಮ್ಮನ್ನು ನೆನೆದ ಮೇಲೆ ನಿಮ್ಮ ನಾಮಕ್ಕಿಂತ ಬೇರೊಂದು ಹೆಸರಿಲ್ಲ.

ಇಡೀ ವಿಶ್ವಕ್ಕೆ ಅಧಿಪತಿ ನೀವು ಅದಕ್ಕಾಗಿ ಪಶುಪತಿ ವಿಶ್ವನಾಥ ಎಂದು ನಿಮ್ಮನ್ನು ಕರೆಯುತ್ತಾರೆ. ನಾವು ನಂಬಿರುವ ಸ್ವರ್ಗ ನರಕ ಪಾತಾಳ ಲೋಕಕ್ಕೆ ನೀನೇ ದೈವ. ಅದಕ್ಕಾಗಿ ನಿಮ್ಮನ್ನು ನಂಬಿದ್ದೇವೆ ಕೂಡಲ ಸಂಗಮದೇವ.

**ಸಾರಾಂಶ**

ಈ ವಚನದಲ್ಲಿ ಶಿವನ ದೈಹಿಕ ಸ್ವರೂಪ ಹೇಗಿದೆ ಎಂಬುದನ್ನು ವಿವರಿಸಲಾಗಿದೆ. ಮುಖದಲ್ಲಿ ರುದ್ರನಿದ್ದಾನೆ, ಭುಜದಲ್ಲಿ ವಿಷ್ಣುವಿದ್ದಾನೆ. ಮೊಳಕಾಲಿನಲ್ಲಿ ಬ್ರಹ್ಮ, ಪಾದದಲ್ಲಿ ಇಂದ್ರ, ಮನದಲ್ಲಿ ಚಂದ್ರನಿದ್ದಾನೆ. ಕಣ್ಣಿನಲ್ಲಿ ಸೂರ್ಯ ಉದಯಿಸಿದನು. ಆತನ ಮುಖದಲ್ಲಿ ಅಗ್ನಿದೇವನಿದ್ದಾನೆ. ಪ್ರಾಣದಲ್ಲಿ ವಾಯುವಿದೆ. ವಕ್ಕುಳಲ್ಲಿ ಇಡೀ ಅಂತರಿಕ್ಷವನ್ನೇ ಹೊತ್ತು, ಇಡೀ ದೇಹದಲ್ಲಿ ಶತಕೋಟಿ ದೇವರು ನೆಲೆಸಿದ್ದಾರೆ. ಶಿವನ ಪಾದದಲ್ಲಿ ಭೂಮಿ ಜನಿಸಿತು ಆತನ ಕಿವಿಗಳಿಂದ ದಶದಿಕ್ಕುಗಳು ನಿರ್ಮಾಣವಾದವು ಈತನಿಗೆ ಸಾವಿರ ಕಣ್ಣು ಸಾವಿರ ಕೈ ಸಾವಿರ ಪಾದಗಳಿವೆ. ಕೂಡಲ ಸಂಗಮ ದೇವ ಎಂದು ಈ ಕೆಳಗಿನ ವಚನದಿಂದ ಶಿವನ ಭವ್ಯ ರೂಪ ದರ್ಶನದ ರೀತಿಯನ್ನು ವಿವರಿಸಿದ್ದಾನೆ.

ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜ ಜನನವು
ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು
ಮುಖದಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು
ನಾಭಿಯಲ್ಲಿ ಅಂತರಿಕ್ಷವು
ಶಿರದಲುದಯವು ತತ್ತೀಸಿಕೋಟಿ ದೇವತೆಗಳು

ಪಾದತಳದಲ್ಲಿ ಭೂಮಿ ಜನನವು
ಶ್ರೋತ್ರದಲ್ಲಿ ದಶದಿಕ್ಕುವು
ಜಗವ ನಿಕ್ಷೇಪಿಸಿದ ಕಕ್ಷೆಯಲ್ಲಿ ಅಕ್ಷಯನಗಣಿತನು
ಸಾಸಿರ ತಲೆ ಸಾಸಿರ ಕಣ್ಣು ಸಾಸಿರ ಕೈ ಸಾಸಿರ ಪಾದ
ಸಾಸಿರ ಸನ್ನಿಹಿತ ಕೂಡಲ ಸಂಗಯ್ಯ[೧೪]

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ
ಒಬ್ಬನೇ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ
ಕೂಡಲ ಸಂಗಮ ದೇವನಲ್ಲದಿಲ್ಲೆಂದಿತ್ತು ಬೇದ[೧೫]

"ನಂಬಬಲ್ಲ ಭಕ್ತರಿಗೆ ದೇವರೊಬ್ಬನೆ ಕಾಣಿರೋ", "ದೇವರೊಬ್ಬನೇ ನಾಮ ಹಲವು" ಇಂತಹ ಅನೇಕ ದಾಸರ ವಾಣಿ ಶರಣರ ನುಡಿ ಕೇಳಿದರೂ ಸಹ ಕೆಲವು ಮಾನವರಿಗೆ ಸಾವಿರ ದೇವರ ಮೇಲೆ ಭಕ್ತಿ. ಯಾರು ಎಲ್ಲಿಯೋ ದೇವರನ್ನು ಕಂಡಿಲ್ಲ ಆದರೂ ಸಹ ಅತನ ಮೇಲೆ ಭಕ್ತಿ ಇದೆ. ಸರಿ ಆದರೆ ಏಕದೇವೋಪಾಸನೆಯನ್ನು ಮಾಡುವುದು ಮರೆತಿದ್ದೇವೆ.

ದೇವ ಇಬ್ಬರು ಮೂವರಿದ್ದಾರೆ ಎಂದು ಗರ್ವದಿಂದ ನುಡಿಯಬೇಡ, ಇರುವುದು ಒಬ್ಬನೇ ದೇವರು. ಯಾರು ಇಬ್ಬರೆಂದು ತಿಳಿಯುತ್ತಾರೋ ಅವರನ್ನು ಹುಚ್ಚರೆಂದು ತಿಳಿ. ಆ ವಿಷಯ ಸುಳ್ಳು ಇರುವುದಾದರೆ ಆ ಶಿವನೊಬ್ಬನೆ ದೇವರು ಕಾಣಿರೋ ಎಂದು ಹೇಳಿದ್ದಾರೆ.

## ವಚನ ಸಂಕಲನ ಸಂಪುಟ ೪

ಈ ಕೃತಿಯಲ್ಲಿ ಸಂಗ್ರಹ, ಸಂಕಲನ, ಸಂಪಾದಸನೆ ಎಂಬ ಮೂರು ಪ್ರಕಾರಗಳನ್ನು ಕಾಣಬಹುದು. ಸಂಗ್ರಹಕ್ಕೆ ಶ್ರಮ ಸಾಕು, ಸಂಕಲನಕ್ಕೆ ಹೆಚ್ಚಿನದಾಗಿ ಪಾಂಡಿತ್ಯವಿರಬೇಕು. ಸಂಪಾದನೆಗೆ ಇನ್ನೂ ಹೆಚ್ಚಿನ ಪ್ರತಿಭೆ ಇರಬೇಕು. ಇದರಲ್ಲಿ ಅನೇಕ ಪ್ರಾಚೀನ ವಚನಗಳನ್ನು ಸಂಗ್ರಹಿಸಿ ಪರಿಷ್ಕರಿಸಿದ್ದಾರೆ.

ಈ ಕೃತಿಯನ್ನು ಡಾ.ಎಂ.ಎಂ.ಕಲಬುರ್ಗಿ, ಡಾ.ಬಿ.ಆರ್ .ಹಿರೇಮಠ ಹಾಗೂ ಶ್ರೀ ಎಸ್.ಶಿವಣ್ಣ ಈ ಮೂವರು ವಿದ್ವಾಂಸರು ವಿಶೇಷ ಪರಿಶ್ರಮ ವಹಿಸಿ ಸಂಪಾದಿಸಿ ಕೊಟ್ಟಿದ್ದಾರೆ. ಇವುಗಳಲ್ಲಿ ಕೆಲವು ಹೊಸ ವಚನಗಳು ಮೊದಲ ಬಾರಿಗೆ ಇಲ್ಲಿ ಬೆಳಕು ಕಾಣುತ್ತಲಿವೆ.

ಒಟ್ಟಾರೆ ಈ ಸಂಪುಟ, ಆರಲ್ಲಿ ಮೂರು ರೀತಿಯ ವಿಷಯಗಳನ್ನು ನಾವು ಮನಗಾಣಬಹುದು.

೧. ಮಿಶ್ರಷಟ್ಸ್ಥಲದ ವಚನಗಳ ಬಗ್ಗೆ
೨. ಟೀಕಿನ ಏಕೋತ್ತರ ಶತಸ್ಥಲದ ಬಗ್ಗೆ
೩. ಸಕಲ ಪುರಾತರ ವಚನ ಸಂಗ್ರಹದ ಬಗ್ಗೆ

ಈ ಮೇಲಿನವುಗಳನ್ನು ನಾವು ಮುಂದಿನ ಉಪ ಅಧ್ಯಾಯಗಳಲ್ಲಿ ಅವುಗಳ ವೈಶಿಷ್ಟ್ಯ ಮತ್ತು ಅವುಗಳ ತಾತ್ಪರ್ಯವನ್ನು ನೋಡೋಣ.

## ೧. ಮಿಶ್ರಷಟಸ್ಥಲದ ವಚನ

ವ್ಯಕ್ತಿ ಕಲ್ಯಾಣ, ಸಮಾಜ ಕಲ್ಯಾಣಗಳ ಸಮಸಮವಾಗಿ ಸಾಗಬೇಕಾದುದು. ಪರಿಪೂರ್ಣ ಸಮಾಜದ ಲಕ್ಷಣ. ಇವುಗಳಲ್ಲಿ ವೀರಶೈವ "ಜಂಗಮ ದಾಸೋಹ" ಸಮಾಜ ಕಲ್ಯಾಣ ಸಾಧನವಾದರೆ, "ಲಿಂಗ ಪೂಜೆ" ವ್ಯಕ್ತಿ ಕಲ್ಯಾಣದ ಸಾಧನವಾಗಿದೆ. ಈ ಲಿಂಗಪೂಜಾ ಮಾಧ್ಯಮದಿಂದ ವ್ಯಕ್ತಿ ಆರು ಹಂತಗಳಲ್ಲಿ ತನ್ನನ್ನು ಉನ್ನತೀಕರಿಸಿಕೊಂಡು ಶುದ್ಧನಾಗುತ್ತಾನೆ.

ಈ ಆರು ಹಂತಗಳನ್ನೇ ವೀರಶೈವದಲ್ಲಿ "ಷಟ್ ಸ್ಥಲ"ವೆಂದು ಕರೆಯುತ್ತಾರೆ. ಅವು. ೧. ಭಕ್ತ, ೨. ಮಹೇಶ, ೩. ಪ್ರಸಾದಿ, ೪. ಪ್ರಾಣಲಿಂಗ, ೫. ಶರಣ, ೬. ಐಕ್ಯ.

ಈ ಷಟ್ ಸ್ಥಲವನ್ನು ಅನುಸಂಧಾನ (Practice) ಮತ್ತು ಅನುಸರಣೆ(F unction) ಹೀಗೆ ಎರಡು ದೃಷ್ಟಿಯಿಂದ ವೀರಶೈವದಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಒಂದನ್ನು ಆಚರಣೆಯ ಸ್ಥಳಕ್ರಮವೆಂದು, ಇನ್ನೊಂದನ್ನು ಅನುಭಾವ ಸ್ಥಲಕ್ರಮವೆಂದು ಕರೆಯುತ್ತಾರೆ.

ಆರು ಷಟ್ ಸ್ಥಲಗಳ ಜೊತೆಗೆ ೧೨ನೇ ಶತಮಾನದಲ್ಲಿ ಶರಣು ಸ್ಥಾಪಿಸಿದ ಹೊಸಪ್ರಕಾರವನ್ನು ಸೇರಿಸಿ ಒಂದು ಷಟ್ ಸ್ಥಲದಲ್ಲಿ ಮತ್ತೆ ಆರು ಷಟ್‌ಸ್ಥಲ ತಿಳಿಸುತ್ತಾರೆ. ಉದಾ : ಭಕ್ತನ ಭಕ್ತ ಸ್ಥಲ, ಭಕ್ತನ ಮಹೇಶ್ವರ ಸ್ಥಲ, ಭಕ್ತನ ಐಕ್ಯ ಸ್ಥಳ, ಭಕ್ತನ ಪ್ರಾಣಲಿಂಗ ಸ್ಥಳ, ಭಕ್ತನ ಶರಣ ಸ್ಥಲ, ಭಕ್ತನ ಐಕ್ಯ ಸ್ಥಲ

ಈಗೆ ಒಟ್ಟು ೩೬ ಸ್ಥಲಗಳ ವ್ಯವಸ್ಥೆಯನ್ನು 'ಮಿಶ್ರ ಷಟ್ ಸ್ಥಲ'ವೆಂದು ಕರೆಯುತ್ತಾರೆ. ಭಕ್ತನ ಆಚಾರದಿಂದ, ಭಕ್ತನ ಗುರುಲಿಂಗದಿಂದ ರೀತಿಯಲ್ಲಿ ಸೇರಿಸಿದ ವಚನಕೃತಿಗೂ "ಮಿಶ್ರಷಟ್ ಸ್ಥಲ"ವೆಂದೇ ಕರೆಯುತ್ತಾರೆ. ಇಲ್ಲಿ ೧೮ ಸಾಕಾರ ಸ್ಥಲವಾದರೆ, ೧೮ ನಿರಾಕಾರ ಸ್ಥಲವೆನಿಸಿವೆ. ಚೆನ್ನಬಸವಣ್ಣನವರ ವಚನಗಳನ್ನು ಬಳಸಿಕೊಂಡು ಈ ಕೃತಿಯಲ್ಲಿ ಸಂಯೋಜಿಸಿದ್ದಾರೆ.

ಚೆನ್ನಬಸವಣ್ಣನವರ ವಚನಗಳಲ್ಲಿ ೧. ಭಕ್ತ, ಮಹೇಶ, ಪ್ರಸಾದಿ... ೨. ಭಕ್ತನ ಭಕ್ತ, ಭಕ್ತನ ಮಹೇಶ... ೩. ಭಕ್ತನ ಆಚಾರಲಿಂಗ, ಭಕ್ತನ ಗುರುಲಿಂಗ... ಹೀಗೆ ಮೂರು ಬಗೆಯ ಷಟ್ ಸ್ಥಲ ಕ್ರಮದಲ್ಲಿ ಸಂಯೋಜಿಸಿದ ಕಟ್ಟುಗಳು ಸಿಗುತ್ತವೆ. ಇಂತ ಮೂರು ಕೃತಿಗಳನ್ನು ವೀರಶೈವ ಅಧ್ಯಯನ ಸಂಸ್ಥೆ ತೋಂಟದಾರ್ಯಮಠದಿಂದ "ಚೆನ್ನಬಸವಣ್ಣನವರ ಷಟ್ ಸ್ಥಲ ವಚನ ಮಹಾಸಂಪುಟ" ಹೆಸರಿನಿಂದ ಪ್ರಕಟಿಸಿದೆ. ಇವುಗಳಲ್ಲಿ "ಮಿಶ್ರ ಷಟ್ ಸ್ಥಲ ವಚನ" ಹೆಸರಿನ ಕೃತಿಯನ್ನು ಶಿವಣ್ಣನವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ಈ ಕೃತಿಯ ಪರಿಷ್ಕರಣಕ್ಕಾಗಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಯನ್ನು ಆಧಾರ ಪ್ರತಿಯನ್ನಾಗಿ ಇಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ "ಚೆನ್ನ ಬಸವಣ್ಣನವರ ವಚನಗಳು" (ದ್ವಿ.ಆ) ಕೃತಿಯನ್ನು ಪಾಠ ಪರಿಷ್ಕರಣಕ್ಕಾಗಿ ಬಳಸಿಕೊಂಡಿದ್ದಾರೆ.

**ಮಿಶ್ರಷಟ್ಸ್ಥಲದ ವಚನ**

ಗುದಸ್ಥಾನದಲ್ಲಿ ಆಧಾರ ಚಕ್ರ
ಅಲ್ಲಿಗೆ ಪೃಥ್ವಿಯೆಂಬ ಮಹಾಭೂತ, ಸದ್ಯೋಜಾತ "ಉಕ್ತ" ಬ್ರಹ್ಮ ಪೂಜಾರಿ
ಸುವರ್ಣದ ತೇಜ, ಬಾಲರವಿ ಕೋಟಿ ಸೂರ್ಯ ಪ್ರಕಾಶ
ನಾಲ್ಕೆಸಳಿನ ತಾವರೆಯ ಕಮಲ ಮಧ್ಯದಲ್ಲಿ
ಸುವರ್ಣ ಭಾವದ ಲಿಂಗ
ಅದು ಆಚಾರ ಲಿಂಗ
ಅದಕ್ಕೆ ಬೀಜಾಕ್ಷರ ಓಂ ನಾಂ ನಾಂ ನಾಂ ಎಂಬ ನಾದ ಘೋಷ
ಎಸಳು ನಾಲ್ಕರಲ್ಲಿ ವ ಶಷಸ ಎಂಬ ನಾಲ್ಕು ಅಕ್ಷರ
ಅದು ದೇವರಿಗೆಯೂ ತನಗೂ ಪಶ್ಚಿಮ ಮುಖಿ
ಸದ್ಯೋಜಾತ ವಕ್ತ್ರ ಆಧಾರ ಚಕ್ರ[೭]

ಈ ಮೇಲಿನ ವಚನದಂತೆ ಇನ್ನೂ ೬ ವಚನಗಳಿವೆ. ಅವು ಲಿಂಗಸ್ಥಾನ ನಾಭಿಸ್ಥಾನ, ಹೃದಯಸ್ಥಾನ, ಕಂಠಸ್ಥಾನದಿಂದ ಆರಂಭವಾಗುತ್ತವೆ. ಈ ಎಲ್ಲ ವಚನಗಳಲ್ಲಿ ದೇವರ ಸ್ಥಿತಿಯುನ್ನು ಕಾಣಬಹುದು. ಪ್ರಕೃತಿಯ ವರ್ಣನೆಯನ್ನು ಕಾಣಬಹುದು. ಜೊತೆಗೆ ಒಂದೊಂದು ವಚನದಲ್ಲಿ ಅಷ್ಟ ತನುವಿನ ಬಗ್ಗೆ ತಿಳಿಸಲಾಗಿದೆ. ಅವು (ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಮನ, ಚಂದ್ರ) ತಿಳಿಸಿದ್ದಾರೆ. ಅಂರಂತೆಯೇ ಬಿಜಾಕ್ಷರ ರೂಪದಲ್ಲಿ ದೇವರನ್ನು ಸ್ತುತಿಸುವ 'ಓಂ ನಮಃ ಶಿವಾಯ' ಎಂಬ ಮಂತ್ರವೂ ಕೂಡ ಅಡಗಿದೆ. ಅವು ಒಂದೊಂದು ವಚನದಲ್ಲಿ ಒಂದೊಂದು ಅಕ್ಷರ ಬಂದಿದೆ. ನಂತರ ದೇವರನ್ನು ಆರಾಧಿಸುವ ತಾವರೆ ಹೂವಿನ ಎಸಳನ್ನು ಹೆಸರಿಸುವುದರ ಮೂಲಕ ಅವು ಎಷ್ಟು ಎಸಳು ಇರುತ್ತವೆಯೋ ಅಷ್ಟು ವರ್ಣಮಾಲೆಯ ಎಲ್ಲ ಅಕ್ಷರಗಳನ್ನು ಉಪಯೋಗಿಸಿದ್ದಾರೆ. ಅವು ಒಂದೊಂದು ವಚನದಲ್ಲಿ ಎಸಳಿನ ಆಧಾರದ ಮೇಲೆ ಚಿತ್ರಿಸಲಾಗಿದೆ.

ಈ ರೀತಿ ಮಿಶ್ರಷಟ್ಸ್ಥಲ ವಚನ ರಚಿಸುವುದರ ಮೂಲಕ ಭಗವಂತನಿಗೂ ನಮಗೂ ನಿಕಟ ಸಂಬಂಧವನ್ನು ಕಲ್ಪಿಸಲಾಗಿದೆ. ಇಡೀ ವಿಶ್ವವೇ ನಿನ್ನ ಛಾಯೆ ನಿನ್ನಿಂದಲೇ ಈ ಜಗ ಎಂಬಂತೆ ಏಳು ವಚನಗಳಿಂದ ಚಿತ್ರಿಸಿದ್ದಾರೆ.

ಆಚಾರಲಿಮಗ ಗುರುಲಿಂಗ ಶಿವಲಿಂಗ

ಜಂಗಮಲಿಂಗ ಪ್ರಸಾದಿಂಗ ಮಹಾಲಿಂಗವೆಂಬ ಶಿವಲಿಂಗ ಸ್ಥಲವಾರು

ಇಂತೀ ಆರು ಲಿಂಗದಲ್ಲಿ ಸ್ಥಲ ಹದಿನೆಂಟಾದ ಪರಿ ಎಂತೆಂದರೆ

ಒಂದೊಂದು ಲಿಂಗದಲ್ಲಿ ಮೂರು ಮೂರು ಸ್ಥಲ ನಡೆಯಲಿಕ್ಕಾಗಿ

ಹದಿನೆಂಟು ಲಿಂಗಸ್ಥಲವಾದವು ಅದು ಹೇಂಗೆಯೆಂದರೆ

ಆಚಾರಲಿಂಗ ತ್ರಿವಿಧ : ಸದಾಚಾರ, ನಿಹಿತಾಚಾರ, ಗಣಾಚಾರ

ಗುರುಲಿಂಗಸ್ಥಲ ತ್ರಿವಿಧ : ದೀಕ್ಷೆ, ಶಿಕ್ಷೆ, ಸ್ವಾನುಭಾವ

ಶಿವಲಿಂಗಸ್ಥಲ ತ್ರಿವಿಧ : ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗ

ಜಂಗಮಲಿಂಗಸ್ಥಲ ತ್ರಿವಿಧ : ಸ್ವಯಂ, ಚರ, ಪರ

ಪ್ರಸಾದ ಲಿಂಗಸ್ಥಲ ತ್ರಿವಿಧ : ಶುದ್ಧ, ಸಿದ್ಧ, ಪ್ರಸಿದ್ಧ

ಮಹಾಲಿಂಗ ಸ್ಥಲ ತ್ರಿವಿಧ : ಪಿಂಡಜ, ಅಂಡಜ, ಬಿಂದ್ವಾಕಾಶ ೧೮

ಭಕ್ತಸ್ಥಲ ತ್ರಿವಿಧ : ಗುರುಭಕ್ತ ಲಿಂಗಭಕ್ತ ಜಂಗಮಭಕ್ತ

ಮಹೇಶ್ವರಸ್ಥಲ ತ್ರಿವಿಧ : ಇಹಲೋಕವೀರ, ಸರಲೋಕವೀರ, ಲಿಂಗವೀರ

ಪ್ರಸಾದ ಸ್ಥಲ ತ್ರಿವಿಧ : ಪದಾರ್ಥ ಪ್ರಸಾದಿ, ಅವಧಾನ ಪ್ರಸಾದಿ, ಸಮತಾ ಪ್ರಸಾದಿ

ಪ್ರಾಣಲಿಂಗಸ್ಥಲ ತ್ರಿವಿಧ : ಆಚಾರಪ್ರಾಣಿ, ಲಿಂಗಪ್ರಾಣಿ, ಜಂಗಮಪ್ರಾಣಿ

ಶರಣ ಸ್ಥಲ ತ್ರಿವಿಧ : ಇಷ್ಟಾಲಿಂಗಾರ್ಚಕ, ಪ್ರಾಣಲಿಂಗಾರ್ಚಕ, ತೃಪ್ತಿಲಿಂಗಾರ್ಚಕ

ಐಕ್ಯಸ್ಥಲ ತ್ರಿವಿಧ : ಕಾಮಲಿಂಗೈಕ್ಯ, ಜೀವ ಲಿಂಗೈಕ್ಯ, ಭಾವಲಿಂಗೈಕ್ಯ=೧೮[೭೭]

ಈಗೆ ಅಂಗಸ್ಥಲ ೧೮ ಲಿಂಗಸ್ಥಲ ೧೮ ಒಟ್ಟು ಮೂವತ್ತಾರು ಸ್ಥಲಗಳಾದವು. ಅವುಗಳ ವಿವರಣೆಯನ್ನು ಈ ಕೆಳಗಿನಂತೆ ನೋಡೋಣ.

**ಷಡುಸ್ಥಲದ ಭಕ್ತ :** ಆಚಾರಲಿಂಗ ಮೋಹಿತನಾದರೆ ಸಖ ಸಹೋದರರ ಮೋಹವಂ ಮರೆಯಬೇಕು. ಆಚಾರಲಿಂಗ ಭಕ್ತನಾದರೆ ಪೂರ್ವಾಚಾರದಲ್ಲಿ ನಡೆಯಲಾಗದು. ಆಚಾರ ಲಿಂಗ ಪೂಜಕನಾದರೆ, ಆಚಾರವಿಲ್ಲದವರ ಪೂಜಿಸಲಾಗದು, ಆಚಾರಲಿಂಗ ವೀರನಾದರೆ ತಾನು ಹಿಡಿದ ಛಲ ನೇಮವನ್ನು ಬಿಡಲಾಗದು, ಆಚಾರಲಿಂಗ ಪ್ರಾಣಿಯಾದರೆ ಭಕ್ತನಿಂದೆಯಂ ಕೇಳಲಾಗದು. ಆಚಾರಲಿಂಗ ಪ್ರಸಾದಿಯೊಂದೆ ಅಶುಚಿಯಾಗಿ ಇರಲಾಗದು. ಇವು ಆರು ಆಚಾರ ಲಿಂಗಭಕ್ತ.

ಗುರುಲಿಂಗ ಮೋಹಿತನಾದರೆ ಮಾತಾಪಿತರ ಮೋಹವಂ ಮರೆಯಬೇಕು. ಗುರುಲಿಂಗಭಕ್ತನಾದರೆ ಪೂರ್ವಬಂಧಗಳನ್ನು ಮರೆಯಬೇಕು. ಗುರುಲಿಂಗ ಪೂಜಕನಾದರೆ ಅನ್ಯರ ಪೂಜೆಯಂ ಮಾಡಲಾಗದು. ಗುರು ಲಿಂಗ ವೀರನಾದರೆ ಗುರು ಮಾರ್ಗಾಚಾರವಂ ನಡೆಯಬೇಕು. ಗುರುಲಿಂಗ ಪ್ರಸಾದಿಯಾದರೆ

ಗುರುವಿನಾಜ್ಞೆಯನ್ನು ಮರೆಯಲಾಗದು. ಗುರುಲಿಂಗ ಪ್ರಾಣಿಯಾದರೆ ಮಾನವರ ಸೇವೆಯಂ ಮಾಡಲಾಗದು, ಇವು ಆರು ಲಿಂಗಭಕ್ತಿ.

ಶಿವಲಿಂಗ ಮೂಹಿತನಾದರೆ ಅನ್ಯ ಮೋಹವಂ ಮರೆಯಬೇಕು. ಶಿವಲಿಂಗ ಭಕ್ತನಾದರೆ ಅನ್ಯಭಕ್ತಿಯಂ ಮಾಡಲಾಗದು, ಶಿವಲಿಂಗ ಪೂಜಿತನಾದರೆ ಬೇರೆ ದೇವರ ಪೂಜೆ ಮಾಡಲಾಗದು. ಶಿವಲಿಂಗ ವೀರನಾದರೆ ಅನ್ಯ ಕ್ಷೇತ್ರವಂ ಮೆಟ್ಟಲಾಗದು. ಶಿವಲಿಂಗ ಪ್ರಸಾದಿಯಾದರೆ ಅಂಗಭೋಗಂಗಳ ಮರೆಯಬೇಕು. ಶಿವಲಿಂಗ ಪ್ರಾಣಿಯಾದರೆ ಅನ್ಯಸತಿಸಂಗವಂ ಮಾಡಲಾಗದು. ಇವು ಆರು ಶಿವಲಿಂಗ ಭಕ್ತ.

ಜಂಗಮಲಿಂಗ ಮೋಹಿತನಾದರೆ ಕುಲಗೋತ್ರದ ಮೋಹವಂ ಮರೆಯಬೇಕು. ಜಂಗಮ ಲಿಂಗಭಕ್ತನಾದರೆ ಪೂರ್ವಕುಲವ ಬೆರೆಸಲಾಗದು. ಜಂಗಮ ಲಿಂಗ ಪೂಜಕನಾದರೆ ಮಾನವರ ಬೇಡಲಾಗದು. ಜಂಗಮಲಿಂಗ ವೀರನಾದರೆ, ಅರ್ಥಮಂ ಕಟ್ಟಲಾಗದು. ಜಂಗಮಲಿಂಗ ಪ್ರಸಾದಿಯಾದರೆ ಬೇಡಿದವರಿಗೆ ಇಲ್ಲಯೆನ್ನಲಾಗದು, ಜಂಗಮ ಪ್ರಾಣಿಯಾದರೆ, ಲಾಂಚನದ ನಿಂದೆಯಂ ಕೇಳಲಾಗದು, ಇವು ಆರು ಜಂಗಮ ಲಿಂಗಭಕ್ತ.

ಪ್ರಸಾದಲಿಂಗ ಮೋಹಿತನಾದರೆ ಪಡಿಪದಾರ್ಥದ ಮೇಲಣ ಮೋಹವಂ ಮರೆಯಬೇಕು. ಪ್ರಸಾದಲಿಂಗ ಭಕ್ತನಾದರೆ ಶೇಷ ಪ್ರಸಾದಕಲ್ಲದೆ ಬಾಯದೆರೆಯಲಾಗದು. ಪ್ರಸಾದಲಿಂಗ ಪೂಜಕನಾದರೆ ಅನ್ಯರಿಗೆ ಉಣಲಿಕ್ಕಲಾಗದು, ಪ್ರಸಾದಲಿಂಗ ವೀರನಾದರೆ ಅನ್ಯರಿಗೆ ಕೈಯ ಮುಗಿಯಲಾಗದು. ಪ್ರಸಾದ ಲಿಂಗ ಪ್ರಸಾದಿಯಾದರೆ, ಆತ್ಮ ನಿಗ್ರಹವಂ ಮಾಡಲಾಗದು. ಪ್ರಸಾದ ಲಿಂಗ ಪ್ರಾಣಿಯಾದರೆ ಜೀವ ಹಿಂಸೆಯಂ ಮಾಡಲಾಗದು. ಇದು ಆರು ಪ್ರಸಾದ ಲಿಂಗಭಕ್ತಿ.

ಮಹಾಲಿಂಗ ಮೋಹಿತನಾದರೆ ಲೋಕದ ಮೋಹವಂ ಮರೆಯಬೇಕು. ಮಹಾಲಿಂಗ ಭಕ್ತನಾದರೆ ಪೂರ್ವವಿದ್ಯೆಯಂ ಮಾಡಲಾಗದು. ಮಹಾಲಿಂಗ ಪೂಜಕನಾದರೆ ಅನ್ಯ ಸಂಭಾಷಣೆಯನ್ನು ಮಾಡಲಾಗದು. ಮಹಾಲಿಂಗ ವೀರನಾದಡೆ ಪ್ರಳಯಾಗ್ನಿಗಳಿಗಂಜಲಾಗದು. ಮಹಾಲಿಂಗ ಪ್ರಸಾದಿಯಾದರೆ ಸಮತೆ ನೆಲೆಗೊಳ್ಳಬೇಕು. ಮಹಾಲಿಂಗ ಪ್ರಾಣಿಯಾದರೆ ಮನದ ಕೊನೆಯಲ್ಲಿ ಶಿವಸ್ಮರಣೆ ಮರೆಯಲಾಗದು. ಇವು ಆರು ಮಹಾಲಿಂಗ ಭಕ್ತ. ಒಂದೊಂದು ಲಿಂಗಕ್ಕೆ ಆರಾರು ಆಚರಣೆಯಿಂದ ಆಚರಿಸಲಾಗಿ ಒಟ್ಟು ಮುವತ್ತಾರು ಲಿಂಗಸ್ಥಲವಾದವು.

**ಸಾಕಾರ ಹದಿನೆಂಟು ಕುಳ**

ಇಲ್ಲಿ ಒಂದೊಂದು ಷಟ್ಸ್ಥಲದಲ್ಲಿ ಆರಾರು ಬಂದು ಒಟ್ಟು ಮೂವತ್ತಾರಿವೆ. ಅದರಲ್ಲಿ ಆರನ್ನು ಮಾತ್ರ ವಿವರಿಸಲಾಗಿದೆ.

ಭಕ್ತಸ್ಥಲದ ಬಗ್ಗೆ

ಆವ ಭಕ್ತನು ಶಾಂತನಾಗಿರಬೇಕು
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು
ಭೂತಹಿತವಚನವ ನುಡಿಯಬೇಕು, ಜಂಗಮಲಿಂಗದಲ್ಲಿ ನಿಂದೆಯಿಲ್ಲದಿರಬೇಕು
ಸಕಲ ಪ್ರಾಣಿಗಳ ತನ್ನಂತೆ ಕಾಣಬೇಕು
ತನು ಮನ ಧನವ ಗುರುಲಿಂಗ ಜಂಗಮಕ್ಕೆ ಸವೆಸಬೇಕು
ಅಪಾತ್ರದಾನವಂ ಮಾಡಲಾಗದು
ಸಕಲೇಂದ್ರಿಯಗಳು ತನ್ನ ವಶವಂ ಮಾಡಬೇಕು
ಇದೆ ಮೊದಲಲ್ಲಿ ಬೇಕು ನೋಡಾ
ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೆ ಸಾಧನ
ಕೂಡಲ ಚೆನ್ನಸಂಗಮದೇವಯ್ಯ||[೮]

"ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು ನಿಜ ಸೌರಭಾವ ಸೂಸುವಂತೆ" ಎಂಬ ಡಿ.ವಿ.ಗುಂಡಪ್ಪನವರ ಪದ್ಯದ ಸಾಲಿನಂತೆ ಯಾವಾಗಲೂ ಮಾತು ಮಿತವಾಗಿರಬೇಕು. ಎಲ್ಲ ಭಕ್ತರು ಶಾಂತರಾಗಿರಬೇಕು. ತಾನು ಇರುವ ಸ್ಥಳದಲ್ಲಿ ಸತ್ಯನಿಷ್ಟನಾಗಿ ಇನ್ನೊಬ್ಬರಿಗೆ ಮಾದರಿಯಾಗುವಂತೆ ಇರಬೇಕು. ಯಾವಾಗಲೂ ಹಿತವಚನವನ್ನೇ ನುಡಿಯುತ್ತಿರಬೇಕು. ಲಿಂಗ ಜಂಗಮರಲ್ಲಿ ಭೇದ ಭಾವವನ್ನು ಕಲ್ಪಿಸಬಾರದು. ನಮ್ಮ ಸುತ್ತಮುತ್ತ ಇರುವ ಸಕಲ ಜೀವಾತ್ಮಗಳಿಗೆ ಪ್ರೀತಿ ತೋರಿಸಬೇಕು. ತನ್ನ ಸರ್ವಸ್ವವನ್ನೂ ಲಿಂಗ ಮತ್ತು ಜಂಗಮ ಸೇವೆಗೆ ಮೀಸಲಿಡಬೇಕು. ನಮ್ಮ ಪಂಚೇಂದ್ರಿಯಗಳನ್ನು ನಾವುಗೆದ್ದಾಗ ಮಾತ್ರ ಇಡೀ ಪ್ರಪಂಚವನ್ನೇ ನಾವು ಗೆಲ್ಲಲು ಸಾಧ್ಯ ಎಂಬುದೇ ಇದರ ತಾತ್ಪರ್ಯ.

ಮಹೇಶ್ವರ ಸ್ಥಲದ ಬಗ್ಗೆ

ದೇವನೇ ನಿಮ್ಮಗಿಂತ ಹೆಚ್ಚಿನದ ಈ ಭೂಮಿ ಮೇಲೆ ನನಗೇನೂ ಬೇಕಿಲ್ಲ ಎಂದು ಹೇಳುತ್ತಾನೆ. ಉತ್ತಮ ಜನರು ತಮ್ಮ ಹೊಟ್ಟೆಪಾಡಿಗಾಗಿ ಬೇರೆಯವರನ್ನು ಕೈಚಾಚಿ ಬೇಡುವುದಿಲ್ಲ. ಏಕೆಂದರೆ ಪವಿತ್ರವಾದ ಲಿಂಗವನ್ನು ಮುಚ್ಚಿದ ಮೇಲೆ ಅದರಿಂದ ಬೇರೆಯವರಲ್ಲಿ ಬೇಡಬಾರದು. ಆ ಕೈ ಲಿಂಗಕ್ಕೆ ಮೀಸಲು. ಉತ್ತಮರಾದವರು ಪರಸ್ತ್ರೀಯರ ಬಗ್ಗೆ ನಿರ್ಲಿಪ್ತ ಭಾವನೆ ತಾಳುತ್ತಾರೆ. ಮನಸ್ಸಿನಲ್ಲಿಯೂ ಕೂಡ ಬೇರೆ ಹೆಣ್ಣನ್ನು ಸ್ಮರಿಸುವುದಿಲ್ಲ. ನಾವು ಮಾಡುವ ಸೇವೆ ಯಾವಾಗಲೂ ನಿಸ್ವಾರ್ಥದಿಂದ ಕೂಡಿರಬೇಕು ಎಂದು ಹೇಳುತ್ತಾನೆ. ಅದಕ್ಕಾಗಿಯೇ ಕೂಡಲ ಚೆನ್ನಸಂಗದೇವ ನನ್ನ ಜೀವನದ ಕಡೆಯವರೆಗೆ ನಿಮ್ಮ ಸಂಗವೊಂದಿದ್ದರೆ ಸಾಕು ಎಂದು ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾನೆ.

ಸಜ್ಜನ ಸದ್ಭಾವಿ ಅನ್ಯರನು ಕೈಯಾಂತು ಬೇಡ
ಲಿಂಗನ ಮುಟ್ಟಿದ ಕೈ ಮೀಸಲು
ಕಂಗಳಲ್ಲಿ ಒಸೆದು ನೋಡ ಪರವಧುವ, ಮನದಲ್ಲಿ ನೆನೆಯ
ಮಾನವರ ಸೇವೆಯಂ ಮಾಡ
ಲಿಂಗವ ಪೂಜಿಸಿ ಲಿಂಗವಂ ಬೇಡ
ಲಿಂಗ ಕೊಟ್ಟ ಹಂಗನೊಲ್ಲ
ಕೂಡಲ ಚೆನ್ನಸಂಗಾ ನಿಮ್ಮ ಶರಣು||[೯]

ಪ್ರಸಾದಿಸ್ಥಲದ ಬಗ್ಗೆ

ಆ ಲಿಂಗಕೆಂದು ನೆನೆದು, ಲಿಂಗಕೆಂದು ಮಾಡಿ,
ಲಿಂಗಕ್ಕೆಂದು ಕೂಡುವೆನು ನಾನಯ್ಯ.
ಸಕಲ ಪದಾರ್ಥಗಳ ಲಿಂಗಕೆಂದು ಭಾವಿಸುವೆ,
ಅಂಗಗುಣಂಗಳನರೆಯೆ ನಾನು.
ಲಿಂಗಕೆಂದು ಕಾಮಿಸುವೆ ನಾನು ನಿಃಕಾಮಿಯಾಗಿ,
ಎನ್ನ ದೇಹೇಂದ್ರಿಯ ಮನಃ ಪ್ರಾಣಾದಿಗಳು ಲಿಂಗಕ್ಕೆ ಸತಿಗಳಾಗಿ.
ಲಿಂಗಕ್ಕೆ ಬಯಸಿ ಲಿಂಗ ಪ್ರೇಮಿಗಳಾದ ಕಾರಣ,
ಲಿಂಗಕ್ಕೆ ಕೊಟ್ಟುಂಬನು, ಅನರ್ಜಿತವನರೆಯದಿಹೆನು,
ಕೂಡಲ ಚೆನ್ನಸಂಗಮದೇವಾ||[೨೦]

ಸಕಲವೂ ಲಿಂಗಮಯ ನಾನು ಅನವರತ ಪೂಜಿಸುವುದು ಲಿಂಗವನ್ನೇ ಆ ಲಿಂಗವೇ ನನಗೆ ಎಲ್ಲ. ಎಂದು ಇವರು ಹೇಳಿದ್ದಾರೆ. ಬಸವಣ್ಣ ಅದೊಂದು ಕಲ್ಲು ಅದರ ಬದಲು ಹಸಿದವರಿಗೆ ಅನ್ನನೀಡು ಎನ್ನುತ್ತಾರೆ. ಲಿಂಗಕ್ಕೆಂದು ತಿಳಿದು ಲಿಂಗಕ್ಕೆಂದು ಮಾಡಿ ಲಿಂಗಕ್ಕೆ ಕೊಡುವವನು ನಾನು. ನನ್ನಲ್ಲಿರುವ ಸಕಲ ಪಡಿಪದಾರ್ಥಗಳನ್ನು ಲಿಂಗಕ್ಕಾಗಿಯೇ ಎಂದು ಭಾವಿಸುವೆ. ಲಿಂಗವೇ ನನ್ನ ಸಂಸಾರ, ನಾನು ಮತ್ತು ನನ್ನ ಲಿಂಗ ನಾವಿಬ್ಬರೂ ಮನಃಪೂರ್ವಕವಾಗಿ ಸತಿ ಪತಿಗಳಾಗಿದ್ದೇವೆ. ನನ್ನಲ್ಲಿರುವುದೆಲ್ಲ ಲಿಂಗದಿಂದಲೇ ಬಂದಿರುವುದರಿಂದ ಮೊದಲು ಲಿಂಗಕ್ಕೆ ಅರ್ಪಿಸಿ ನಂತರ ನಾನು ಸೇವಿಸುವೆ ಎನ್ನುತ್ತಾರೆ.

ಪ್ರಾಣಲಿಂಗಿ ಸ್ಥಲದ ಬಗ್ಗೆ

ಈ ಕೆಳಗಿನ ವಚನದಲ್ಲಿ ತನ್ನ ಆರಾಧ್ಯ ದೈವವನ್ನು ಯಾವ ರೀತಿ ಪೂಜಿಸುತ್ತೇನೆ ಎಂಬುದನ್ನು ತಿಳಿಸಿದ್ದಾನೆ. ಬಸವಣ್ಣ ದೇಹವೇ ದೇಗುಲ ಶಿರವೇ ಹೊನ್ನ ಕಳಶವೆಂದು ಹೇಳಿದಂತೆ ಚೆನ್ನಬಸವಣ್ಣ ಕೂಡ ನನ್ನ ದೇಹವೆಂಬ ದೇವಾಲಯದಲ್ಲಿ ಮನವೆಂಬ ಸಿಂಹಾಸನದಲ್ಲಿ ನನ್ನ ದೇವರನ್ನು ಕೂರಿಸಿ, ತನುವೆಂಬ ಬಿಂದಿಗೆಯಿಂದ ನೀರನ್ನು ಹಾಕಿ ಹೃದಯ ಕಮಲವೆಂಬ ಪುಷ್ಪದಿಂದ ಪೂಜೆ ಮಾಡುವೆನು.

ನಿನ್ನನ್ನು ಕೊಂಡಾಡಲು ನನ್ನ ನಾಲಿಗೆಯೇ ಗಂಟೆ, ಶಿರವೇ ಬಂಗಾರದ ಕಳಸ, ನನ್ನೆರಡು ಕಣ್ಣುಗಳೇ ನಿನ್ನ ಮುಂದೆ ಬೆಳಗುವ ಜ್ಯೋತಿಗಳು, ಆ ಕಣ್ ಗಳೆಂಬ ಜೋತಿಯ ಬೆಳಕಿನಿಂದ ನಿನಗೆ ಮಂಗಳಾರತಿಯ ಮಾಡುವೆ ಶ್ರೀಚಂದ್ರಶೇಖರದೇವ ನನ್ನ ಇಹ-ಪರದಲ್ಲಿಯೂ ನಿತ್ಯ ನಿನ್ನ ಪೂಜೆಯನ್ನು ಮಾಡದೆ ಇರಲಾರೆನು ಎಂದು ಹೇಳುತ್ತಾನೆ.

ಎನ್ನ ತನುವೆ ಅಗ್ಘವಣಿಯ ಬಿಂದಿಗೆ, ಮನವೆ ಸಿಂಹಾಸನ,
ಹೃದಯಕಮಲವಹ ಪುಷ್ಪದ ಪೂಜೆಯಾ ಮಾಡಿ.
ಎನ್ನ ಕಿವಿಗಳೆ ಕೀರ್ತಿ ಮುಖ, ನುಡಿವ ನಾಲಗೆಯೇ ಗಂಟೆ,
ಶಿರಸವೆ ಸುವರ್ಣದ ಕಳಸ, ನಯನವೇ ಸ್ವಯಂ ಜ್ಯೋತಿ.
ಆರತಿಯನೆತ್ತುವೆ ಎನ್ನ ಚಂದ್ರಶೇಖರ ಲಿಂಗಕ್ಕೆ,
ಮಾಡುವೆ ಎನ್ನ ಪ್ರಾಣ ಪೂಜೆಯ.
ಎನ್ನ ಕಾಯವೆ ಭಾಜನ ಇಹ ಪರಿಯಂತರಾಗಿ,
ಕೂಡಲ ಚೆನ್ನ ಸಂಗಯ್ಯನ ಪೂಜೆಯ ಮಾಡಿದಲ್ಲದೆ.
ನಿಲ್ಲಲಾರೆನಾ||[೨೧]

## ಶರಣ ಸ್ಥಲದ ಬಗ್ಗೆ

ಅರಸನಾಳಿದ ಗ್ರಾಮ ಪುರ ಪಟ್ಟಣದೊಳಗಿರ್ದು
ಸೀಮೆ ನಿಸ್ಸೀಮೆಯೆಂದೇನಯ್ಯ?
ಬಂಧ ನಿರ್ಬಂಧವಿಲ್ಲವಾಗಿ ಶರಣಂಗೆ! ಸಂದು ಸಾಧನವುಂಟೆ?
ಅಗುಸೆಯಲ್ಲಿ ಹೊಕ್ಕು ಚೋರಕಂಡಿಯಲ್ಲಿ ನುಸುಳುವನೆ ಶರಣನು?
ಇದು ಕಾರಣ ಕೂಡಲ ಚೆನ್ನಸಂಗಯ್ಯ
ಅನಿತ್ಯಮಿಥ್ಯವನೆ ಕಳೆದುನಿತ್ಯನಾದ ಶರಣನು||[೨೨]

ಶರಣನಾದವನು ಯಾವಾಗಲೂ ನೇರ ಮತ್ತು ನಿಷ್ಠುರವಾದ ಯಾರ ಹೊಗಳಿಕೆಗೆ ಮೇಲಕ್ಕೇರದೆ, ಯಾರ ತೆಗಳೀಕೆಗೂ ಎದೆಗುಂದನು. ತನಗೆ ಅನಿಸಿದ್ದನ್ನು ನೇರವಾಗಿ ಹೇಳುವಂತಹ ಜ್ಞಾನಿ.

ಈತ ಎಲ್ಲಿದ್ದರೇನು, ಅದೇ ಆತನ ಊರು, ಇವರಿಗೆ ಇಂತಹುದೇ ಎಂಬ ಸ್ಥಳದ ವ್ಯಾಪ್ತಿ ಇಲ್ಲ. ಅಣ್ಣ ತಮ್ಮ ಅಕ್ಕ, ಎಂಬ ಯಾವ ಬಂಧಕ್ಕೂ ಇವರು ಮಣಿಯರು. ಏಕೆಂದರೆ ಅದನ್ನು ಈ ಮೊದಲೇ ತ್ಯಜಿಸಿರುತ್ತಾರೆ. ಪ್ರಾಣ ಹೋಗುವ ಸಂದರ್ಭ ಬಂದರೂ ಸಹ ಆತ ಸತ್ಯವನ್ನೇ ಹೇಳುತ್ತಾನೆ. ಸುಳ್ಳಿನ ಮಾಹೆಯನ್ನು ಹೋಗಲಾಡಿಸಿ ಸತ್ಯವನ್ನು ಗೆಲ್ಲುವಂತೆ ಮಾಡುತ್ತಾನೆ ಎಂಬುದೇ ಈ ವಚನದ ತಾತ್ಪರ್ಯ.

## ಐಕ್ಯ ಸ್ಥಲದ ಬಗ್ಗೆ

ಭೂಮಿಯ ಮೇಲೆ ಇರುವ ಮಾನವರಲ್ಲಿ ಯಾವ ಕುಲಗಳೂ ಇಲ್ಲ. ಇರುವುದು ಒಂದೇ ಕುಲ ಅದೇ ಮಾನವ ಕುಲ. ಇದನ್ನು ಬಹಳ ವರ್ಷಗಳ ಹಿಂದೆ ನಮ್ಮ ಆದಿ ಕವಿಯೆಂದು ಹೆಸರಾದ ಪಂಪನೇ ಹೇಳಿದ್ದಾನೆ. "ಮಾನವ ಕುಲಂ ತಾನೊಂದೇವ ವಲಂ"ಯೆಂದು. ಈಗಿದ್ದರೂ ಕೂಡ ಇನ್ನೂ ನಮ್ಮ ಜನ ಕ್ಷುಲಕ ಜಾತಿ ವಿಚಾರ ಬಿಡಬೇಕು. ನಂತರ ಇನ್ನೊಬ್ಬರ ಬಗ್ಗೆ ದ್ವೇಷ ಇರಬಾರದು. ಅದು ನಮ್ಮನ್ನೇ ಸುಡುತ್ತದೆ. ಇಹಲೋಕದ ಕ್ಷಣಿಕ ಸುಖವನ್ನು ಮೊದಲು ತೊರೆಯಬೇಕು. ಇಲ್ಲದಿದ್ದರೆ ಸಂಸಾರ ಎಂಬ ಸಾಗರದಲ್ಲಿ ಬಿದ್ದು ಮನುಷ್ಯನ ಬೆಳವಣಿಗೆ ಕುಂಟಿತವಾಗುತ್ತದೆ. ಆಗ ಮಾತ್ರ ನಾನು ನಾನಾಗಲು ಸಾಧ್ಯ. ನಾವು ಬೇಡುವುದು ಒಂದೇ. ನನ್ನ ಎಲ್ಲ ದುರ್ಗುಣಗಳನ್ನು ಕಳೆದು ನನ್ನನ್ನು ನಿನ್ನಲ್ಲಿ ಐಕ್ಯನಾಗುವಂತೆ ಮಾಡು ದೇವ ಎಂದು ಈ ಕೆಳಗಿನ ವಚನದಲ್ಲಿ ಹೇಳುತ್ತಾನೆ.

> ಕುಲವಳಿದು ಛಲವಳಿದು ಮತ್ಸರವಳಿದು ಆತ್ಮ ತೇಜವಳಿದು
> ಸರ್ವಹಂಬಲವನಳಿದು ನಿಜ ಉಳ(ಯಿ)ತ್ತು.
> ತಾನು ತಾನಾದ ಸಹಜ ನಿಜ ಪದವಿ
> ಕೂಡಲ ಚೆನ್ನಸಂಗಯ್ಯನಲ್ಲಿ, ತಾನು ತಾನಾದ ಐಕ್ಯಂಗೆ||[೨]

## ಟೀಕಿನ ಏಕೋತ್ತರ ಶತಸ್ಥಲ

ವಚನಗಳನ್ನು ವಿವಿಧ ಸ್ಥಲಗಳಿಗೆ ಅನುಗುಣವಾಗಿ ಸಂಯೋಜಿಸುವ ಕಾರ್ಯ ಹನ್ನೆರಡನೆಯ ಶತಮಾನದಲ್ಲಿಯೇ ಆರಂಭವಾಗಿರುವ ಸಂಗತಿಯನ್ನು ಸಂಶೋಧಕರು ಇತ್ತೀಚೆಗೆ ಆಧಾರಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಬಸವಣ್ಣ, ಚೆನ್ನಬಸವಣ್ಣ ಮೊದಲಾದ ಶಿವಶರಣರ ವಚನಗಳಲ್ಲಿ ಷಟ್ ಸ್ಥಲ ಹಾಗೂ ನೂರೊಂದು ಸ್ಥಲಗಳ ಉಲ್ಲೇಖಗಳೂ ಬಸವ ಪೂರ್ವಯುಗದ ಕೇಶಿರಾಜ ದಂಡನಾಯಕನ ಉಪಲಬ್ಧ ಕೃತಿಗಳಲ್ಲಿ ಷಟ್ ಸ್ಥಲ, ಅಷ್ಟಾವರಣ, ಪಂಚಾಚಾರಗಳ ಪ್ರಸ್ತಾಪವೂ ಬರುವುದನ್ನು ಗಮನಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ದೊರೆತು ಪ್ರಕಟವಾದ ಚೆನ್ನಬಸವಣ್ಣನವರ "ವಚನೈಕೋತ್ತರ ಶತಸ್ಥಲ" ಕೃತಿ ಈ ಅಭಿಪ್ರಾಯವನ್ನು ಇನ್ನೂ ಗಟ್ಟಿಗೊಳಿಸಿಕೊಟ್ಟರೆ. ಹದಿನೈದನೆಯ ಶತಮಾನದ ಮಹಾಲಿಂಗದೈವ "ಏಕೋತ್ತರ ಶತಸ್ಥಳ"ವೇ ನೂರೊಂದು ಸ್ಥಲವನ್ನು ಪ್ರತಿಪಾದಿಸುವ ಪ್ರಪ್ರಥಮ ವಚನಸಂಕನವೆಂಬ ಅಭಿಪ್ರಾಯ ಈಗ ಹಿಂದೆ ಬಿದ್ದು, 'ವಚನೈಕೋತ್ತರ ಶತಸ್ಥಲ' ಕೃತಿಗೆ ಆ ಗೌರವ ಸಂಪ್ರಾಪ್ತವಾಗಿದೆ.

ಮಹಾಲಿಂಗದೇವನ 'ಏಕೋತ್ತರ ಶತಸ್ಥಲ'ದ ತರುವಾಯ ಜಕ್ಕಣಾರ್ಯನ 'ಏಕೋತ್ತರ ಶತಸ್ಥಲ' (ಸ್ವರವಚನ), ಸಿದ್ಧಲಿಂಗೇಶ್ವರ "ಏಕೋತ್ತರ ಶತಸ್ಥಲ"ವೆಂಬ ಸಂಕಲನ ಕೃತಿಗಳು ಹೊರಬಂದವು. ಇದಲ್ಲದೆ ಮಗ್ಗೆಯ ಮಾಯಿದೇವ 'ಪದ್ಯೈಕೋತ್ತರ ಶತಸ್ಥಲ'(ಷಟ್ಪದಿ) ಇಮ್ಮಡಿ ಮುರಿಗಾಗುರುಸಿದ್ಧ

ಶಿವಯೋಗಿಯ "ಕೈವಲ್ಯ ಸೋಪಾನ ನಾಮೈಕೋತ್ತರ ಶತಸ್ಥಲ"(ಷಟ್ಪದಿ)ವೆಂಬ ಸ್ವತಂತ್ರ ಕೃತಿಗಳೂ ರಚನೆಗೊಂಡವು.

ಪ್ರಸ್ತುತ ವಚನ ಸಂಕಲನ ಸಂ-೪ ಕೃತಿ ಸಂಗ್ರಹ ರೂಪದ ಕೃತಿ. ಅದು "ಟೀಕಿನ ಏಕೋತ್ತರ ಶತಸ್ಥಲ" ಅಥವಾ "ಬೊಲ್ಲಿ ಏಕೋತ್ತರ ವಚನ" ಎಂಬ ಹೆಸರನ್ನು ಹೊಂದಿರುತ್ತದೆ. ಇಲ್ಲಿ ಮಹಾಲಿಂಗದೇವನ "ಏಕೋತ್ತರ ಶತಸ್ಥಲ", 'ನೂರೊಂದು ಕುಲ' ನಾಮಗಳೂ ಸೂತ್ರ ಗದ್ಯವೂ ಸ್ವೀಕರಿಸಲ್ಪಟ್ಟಿದೆ. ಆ ಮೇಲೆ ಅಲ್ಲಿಂದ ಒಂದೊಂದು ವಚನವನ್ನು ಮಾತ್ರ ಸೇರಿಸಲಾಗಿದೆ. ಕೆಲವು ಸಲ 'ಏಕೋತ್ತರ ಶತಸ್ಥಲ'ದಲ್ಲಿ ಇರಲಾರದ ವಚನಗಳನ್ನು ಅನ್ಯಮೂಲಗಳಿಂದ ಪಡೆದು, ಹೊಸದಾಗಿ ಜೋಡಿಸಿಕೊಳ್ಳಲಾಗಿದೆ. ಇಲ್ಲಿಯ ಪ್ರತಿಯೊಂದು ವಚನಕ್ಕೂ ವ್ಯಾಖ್ಯಾನವಿದ್ದು, ಇವುಗಳನ್ನು ಹೆಚ್ಚಾಗಿ ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸ ಚರಿತ್ರ ಹಾಗೂ ಮಹಾಲಿಂಗದೇವನ ಪ್ರಭುದೇವರ ಟೀಕಿನ ವಚನಗಳಿಂದ ಆಯ್ದುಕೊಳ್ಳಲಾಗಿದೆ. ಇನ್ನೂ ಕೆಲವು ವಚನ ವ್ಯಾಖ್ಯಾನಗಳನ್ನು ಅನಾಮಧೇಯ ಸಂಗ್ರಹಕಾರನೇ ರಚಿಸಿರಬಹುದು.

ಒಟ್ಟಿನಲ್ಲಿ ಶೂನ್ಯ ಸಂಪಾದನೆ ಹಾಗೂ ಏಕೋತ್ತರ ಶತಸ್ಥಲ ಕೃತಿಗಳಿಗೆ ಹದಿನೈದನೆಯ ಶತಮಾನದ ತರುವಾಯವೇ ಸಂಗ್ರಹ ಕೃತಿಗಳು ಹುಟ್ಟಿಕೊಂಡಿರುವುದು ಗೊತ್ತಾಗುತ್ತದೆ. ಇಂಥ ವಚನ ಸಂಗ್ರಹ ಕೃತಿಗಳು ವ್ಯಾಖ್ಯಾನಗಳಿಂದ ಕೂಡಿರುವುದು ಇವುಗಳ ವೈಶಿಷ್ಟ್ಯ. ಹಾಗೂ ಅಂದಿನ ಅಗತ್ಯತೆಯ ದ್ಯೋತಕವೆನಿಸುತ್ತದೆ.

ಪ್ರಸ್ತುತ ಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ಏಕೈಕ ಕಾಗದ ಪ್ರತಿ (ನಂ.೨೦೬೮, ಪು.೧೦೪-೧೩೮)ಯಿಂದ ಪರಿಷ್ಕರಿಸಿ ಪ್ರಕಟಿಸಿದೆ.

**೨. ಟೀಕಿನ ಏಕೋತ್ತರ ಶತಸ್ಥಲ**

ಶಿಲೆಯೊಳಗಣ ಪಾವಕನಂತೆ
ಉದಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ
ಶಬ್ದದೊಳಗಣ ನಿಃಶಬ್ದದಂತೆ
ಗುಹೇಶ್ವರಾ ನಿಮ್ಮ ಶರಣ ಸಂಬಂಧ[೨೪]

ಭಕ್ತ ಮತ್ತು ಭಗವಂತನ ಸಂಬಂಧ ಹೇಗಿರಬೇಕು ಎಂಬುದೇ ಈ ಮೇಲಿನ ವಚನದ ಸಾರಾಂಶ. ಪ್ರತಿಯೊಬ್ಬರಲ್ಲಿಯೂ ದೇವರಿದ್ದಾನೆ. ಆದರೆ ಅದರ ಇರುವಿಕೆಯನ್ನು ಬಾಹ್ಯಕ್ಕೆ ತೂರಿಸಲಾಗದು. ಅದೊಂದು ಪಾರಮಾರ್ಥಿಕ ಜ್ಞಾನ. ಸಂದರ್ಭಕ್ಕೆ ತಕ್ಕಂತೆ ಮಾತ್ರ ಅದರ ಉಪಯೋಗ ಪಡೆದು ದೇವರ ಇರುವಿಕೆ ತೋರಿಸಬಹುದು ಎಂಬುದನ್ನು ಕೆಲವು ದೃಷ್ಟಾಂತಗಳ ಮೂಲಕ ತಿಳಿಯಪಡಿಸುತ್ತಾನೆ.

ಪ್ರತಿಯೊಂದು ಕಲ್ಲಿನಲ್ಲಿ ಬೆಂಕಿ ಇದೆ. ಆದರೆ ಅದು ಬಾಹ್ಯಕ್ಕೆ ನಮಗೆ ಕಾಣದು. ಎರಡು ಕಲ್ಲು ಮಥಿಸಿದಾಗ ಮಾತ್ರ ಅದರ ರೂಪ ತಿಳಿಯುತ್ತದೆ. ನೀರಿನಲ್ಲಿ ನಮ್ಮ ಪ್ರತಿಬಿಂಬ ಕಾಣುತ್ತದೆ. ಆದರೆ ಅದನ್ನು ಇಡಿಲಾಗದು. ಸಣ್ಣ ಬೀಜದೊಳಗೆ ಮುಂದೊಂದು ದಿನ ದೊಡ್ಡದಾಗಿ ಬೆಳೆಯುವ ಮರವಿದೆ. ಆದರೆ ಬೀಜದಲ್ಲಿ ಅದರ ರೂಪ ಕಾಣದು. ಅದಕ್ಕೆ ಕೆಲವು ಸಂಸ್ಕಾರ ಆದಾಗ ಮರವನ್ನು ಕಾಣಬಹುದು.

ಅದರಂತೆ ದೇವರು. ನಾವು ಅದನ್ನು ಆಳವಾಗಿ ಅಧ್ಯಯನ ಮಾಡಿ ಅಪಾರ ಜ್ಞಾನ ತಿಳಿದಾಗ ಮಾತ್ರ ದೇವರ ಇರುವಿಕೆ ಕಾಣುತ್ತದೆ.

**ಸಂಸಾರ ಹೇಯಸ್ಥಲದ ವಚನ**

ಚಂದ್ರಮನಂತೆ ಕಳೆ ಸಮಗಿಸಿತ್ತೆನಗೆ.
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯ.
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು,
ಇನ್ನೆಂದಿಂಗೆ ಮೋಕ್ಷವಹುದೊ, ಕೂಡಲ ಸಂಗಮ ದೇವಾ?[೨೫]

ಚಂದ್ರನು ಪ್ರಕಾಶ ಮಾನವಾಗಿ ಬೆಳಗಲು ಕತ್ತಲು ಅಡ್ಡ ಬರುವಂತೆ. ಅಲ್ಪನಾಗಿ ಹುಟ್ಟಿದ ನಾನು ಜ್ಞಾನ ಪಡೆಬೇಕೆಂಬ ಹಂಬಲ ಮೂಡಿದರೆ, ಹಾಳಾದ ಸಂಸಾರ ಅದಕ್ಕೆ ಅಡ್ಡ ಬರುತಿಹುದು. ಹೇಗೆ ಜ್ಞಾನ ಪಡೆಯುವುದು ಎಂದು ಜ್ಞಾನಿಗಳು ಚಿಂತಿಸುತ್ತಾರೆ.

**ಗುರುಕರುಣಸ್ಥಲದ ವಚನ**

ಇನ್ನು ಮುಕ್ತನೆಂಬಡೆ ಮುನ್ನಲೇನು ಬದ್ದನೇ?
ಮುನ್ನ ಮುನ್ನವೆ ಮುಕ್ತನು.
ಒಂದು ಹರಣದಿಂದೆ ಬದ್ದನಾದಡೇನು
(ಗುರುಕರುಣದಿಂದ ಮುಕ್ತನು)
ಗುರು ಕರುಣದಿಂದ ಗುರುವಾದ ಬಳಿಕ
ಬದ್ದ ಮುಕ್ತನೆನಲುಂಟೆ
ಉರಿಲಿಂಗಪೆದ್ದಪ್ರಿಯ ಗುರು ವಿಶ್ವೇಶ್ವರಾ?[೨೬]

ಶಿವಾಂಶಿಕವಾದ ಆತನು ತಾನು ಶಿವನೆಂಬುದು ಶಿವಾಜ್ಞೆಯಿಂದ ಮರೆದು ದೇಹ ಸಂಬಂಧಿಯಾಗಿರ್ದಲ್ಲಿ ಶಿವನೆ ಗುರುಮೂರ್ತಿಯಾಗಿ ಕರುಣಿಸಿ ಲಿಂಗಾಂಗಸಂಬಂಧವ ಮಾಡಿದ ಬಲಿಕ ಮುನ್ನಿನಂತೆ ಶಿವ ತಾನಾದುದೆ ಸತ್ಯ. ಮರಳಿ ದೇಹಿಯಾಗಿ ಭವಕ್ಕೆ ಬಾರನೆಂಬುದೀ ವಚನದ ತಾತ್ಪರ್ಯ.

**ಲಿಂಗಾಧಾರಣ ಸ್ಥಲದ ವಚನ**

ಕಂಗಳ ಮುಂದಣ ಶ್ರೀ ಗುರುವು ಹಿಂಗಿದಡೆ
ವ್ರತಕ್ಕೆ ಭಂಗವಾದುದೆಂದು

ತಂದುಕೊಟ್ಟ ಶ್ರೀ ಗುರು, ಕರಸ್ಥಲದಲ್ಲಿ ಪ್ರಾಣಲಿಂಗವ.
ಆದ ಮುಟ್ಟಲೊಡನೆ ತನು ಪ್ರಸಾದ,
ಮನ ಪ್ರಸಾದ ಆದ ಮುಟ್ಟಲೊಡನೆ ತನು ಪ್ರಸಾದ
ಮನ ಪ್ರಸಾದ, ಧನ ಪ್ರಸಾದವಾಯಿತ್ತು.
ಇಂತು ಸರ್ವಾಗ ಪ್ರಸಾದವಾಯಿತ್ತು
ಕೂಡಲ ಸಂಗಮ ದೇವಾ[೨೭]

ಪರಬ್ರಹ್ಮವೇ ಗುರುಮೂರ್ತಿಯಾಗಿ ಬಂದು, ಶಿಷ್ಯಂಗೆ ಪ್ರತ್ಯಕ್ಷವಾಗಿ ಕಾಣಿಸಿ ತನ್ನ ನಿಜ ಸ್ವರೂಪವಕಾಣದೆ, ಮರೆದಡೆ ಭವಿಯಾಗಿ ಭವಬಂಧನದಲ್ಲಿ ತೊಳಲುವನೆಂದು ಆ ಶಿಷ್ಯನ ನಿಜ ನಿಲವಪ್ಪ ಪ್ರಾಣಕಳಾಲಿಂಗವ ಕರಸ್ಥಲಕ್ಕೆ ತಂದುಕೊಡಲು ಆ ಲಿಂಗ ಕಳೆಯನು ಅನನ್ಯಭಾವದಿಂದ ಮುಟ್ಟಿ ಭಾವಿಸಲೊಡನೆ ತನು ಮನ ಇಂದ್ರಿಯ ವಿಷಯ ಪದಾರ್ಥಗಳೆಲ್ಲ ಲಿಂಗಸ್ವರೂಪವಾಯಿತ್ತು ಎಂಬುದೇ ಇದರ ತಾತ್ಪರ್ಯ.

**ಸಾರಾಂಶ**

ಜಂಗಮನೆಂದರೆ ಗಮನ ಸ್ವರೂಪ. ಅಂತು ತನುಮನ ಧರ್ಮವಳಿದು, ತನುಮನ ಧನವ ಗುರು ಲಿಂಗ ಜಂಗಮಕ್ಕೆ ವಂಚನೆಯಿಲ್ಲದೆ ಸಮರ್ಪಿಸುವ, ಸತ್ಕ್ರಿಯಾಚಾರದಿಂದ ಆಚರಿಸುವಾತನೆ ಜಂಗಮನೆಂಬುದೀಗ ಒಡಲಿಲ್ಲಾದಾತ ಜಂಗಮವೆಂಬ ಶಬ್ದಕ್ಕರ್ಥ. ಅಂತಪ್ಪ ಸತ್ಕ್ರೀಯಿಂದ ತನುಧರ್ಮವಳಿದು ಲಿಂಗದಲ್ಲಿ ಪ್ರಾಣವ ಸಮರಸೈಕ್ಯವ ಮಾಡಿ ಕೂಡಿ ಎರಡಿಲ್ಲದೆ ಲಿಂಗವಾಗಿಪ್ಪುದೆ ಭಕ್ತಿಯೆಂಬುದೀಗ ಪ್ರಾಣವಿಲ್ಲದಾತ ಭಕನಯ್ಯ ಎಂಬ ಶಬ್ದಕ್ಕರ್ಥ. ಅಂತು ಶಿವ ಕ್ರಿಯಾಚಾರವನಾಚರಿಸುವ ಚಾರಿತ್ರವೀಗ ಗಮದ ಸ್ವರೂಪದ ಕಾರಣ ಆಚಾರವೇ ಜಂಗಮವೆಂಬ ಶಬ್ದಕ್ಕರ್ಥ. ಅಂತು ಸತ್ಕ್ರೀಯಿಂದ ಪೂಜಿಸುವ ಶರಣನು, ಪೂಜಿಸಿಕೊಂಬ ಲಿಂಗವು ಒಂದೆ ವಸ್ತುವೆಂದದು ಭಿನ್ನ ಭಾವವಳಿದಿಪ್ಪುದೆ ಭಕ್ತಿಯೆಂಬುದೀಗ ವಿಚಾರವೆ ಭಕ್ತ. ಇಂತು ಎರಡಳಿದು ಚರಿಸುವ ಕ್ರಿಯಾಜ್ಞಾನವೇ ಸದ್ಭಕ್ತಿ.

ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯ
ಆಚಾರವೆ ಜಂಗಮ, ವಿಚಾರವೆ ಭಕ್ತನಯ್ಯ
ಆಚಾರ ವಿಚಾರವೆಂಬುದು ಸ್ವಾನುಭವಾ ಸಂಭಾಷಣೆ
ಕೂಡಲ ಸಂಗಮದೇವಾ||[೨೮]

**ತ್ರಿವಿಧ ಸಂಪತ್ತು ಸ್ಥಲದ ವಚನ**

ಹೊಲೆಯುಂಟೆ ಲಿಂಗವಿದ್ದಡೆಯಲ್ಲಿ?
ಕುಲವುಂಟೆ ಜಂಗಮವಿದ್ದಡೆಯಲ್ಲಿ?

ಎಂಜಲುಂಟೆ ಪ್ರಸಾದವಿದ್ದಡೆಯಲ್ಲಿ?
ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕ
ನಿಃ ಕಳಂಕ ನಿಚ್ಛೈಕ್ಯ ತ್ರಿವಿಧ ನಿರ್ಣಯ
ಕೂಡಲಸಂಗಾ ನಿಮ್ಮ ಶರಣ[೨೯]

ನಮ್ಮ ಅಂಗಾಂಗವೆಲ್ಲ ಲಿಂಗವಾದ ಮೇಲೆ, ಶರಣರಿಗೆ ಲಿಂಗ ಜಂಗಮ ಪ್ರಸಾದ ಸಂಗಸಮರಸವಾಗಿದರ ಕಾರಣ, ಶರಣಂಗೆ ಕುಲಸೂತಕ ಹೊಲೆ, ಎಂಜಲು ಸೂತಕ ಮೊದಲಾದ ಸೂತಕಂಗಳುಂಟೆಂದು ನುಡಿದರೆ ಅದೇ ಪಂಚಮಹಾ ಪಾತಕವಾಗುತ್ತದೆ ಎಂಬುದೆ ಇದರ ಸಾರಾಂಶ.

## ಉಪಾಧಿಮಾಟ ಸ್ಥಲದ ವಚನ

ಗಾಳಿಬಂದಾಗ ಭತ್ತದ ಹೊಟ್ಟು ತೂರಿ ಪುಟ್ಬೆಯ ನುಳುಹಿಕೊಂಬಂತೆ, ಹಲವು ದೇಹಂಗಳೊಳಗೆ ಅಪೂರ್ವವಾದ ಮನುಜ ದೇಹವ ಪಡೆದಲ್ಲಿ ಶಿವನಿಗೆ ಶರಣವೊಕ್ಕು ಶಿವಭಕ್ತಿಯ ಮಾಡಿ, ಭವಕರ್ಮದ ಹೊಟ್ಟು ಕಳೆದು ಗಟ್ಟಿಯೆಂಬ ಮುಕ್ತಿಯ ಪಡೆಯಬೇಕೆಂಬುದೇ ಈ ಕೆಳಗಿನ ವಚನದ ತಾತ್ಪರ್ಯ.

ಎಗಾಳಿ ಬೀಸಿದಲ್ಲಿ ತೂರಿಕೊಳ್ಳಿರಯ್ಯ
ಗಾಳಿ ನಿನ್ನಾಧೀನವಲ್ಲ, ಕಂಡಯ್ಯ
ನಾಳೆ ತೂರಿಹೆನೆಂದರೆ, ಇಲ್ಲ ಕಂಡಯ್ಯ
ಶಿವಶರಣನೆಂಬುದೊಂದು ಗಾಳಿ ಹೊಡೆದಲ್ಲಿ
ಬೇಗ ತೂರೆಂದ ನಮ್ಮ ಅಂಬಿಗರ ಚೌಡಯ್ಯ[೩೦]

## ಅಂಗಸ್ಥಲದ ವಚನ

ಅಂಗದ ಕಳೆಯೆ ಲಿಂಗದ ಕಳೆ, ಲಿಂಗದ ಕಳೆಯೆ ಅಂಗದ ಕಳೆ. ಇಂತಹ ಬಳಿಕ ಅಂಗಲಿಂಗವೆಂಬುಭಯ ನಾಮವಿಲ್ಲವೆಂಬ ಭೇದವನರಿದು ಲಿಂಗಸಂಬಂಧವ ಮಾಡಿಕೊಳ್ಳಲು ಆತನೆ ಪ್ರಾಣಲಿಂಗ ಸಂಬಂಧಿಯೆಂಬುಂದೀ ವಚನದ ತಾತ್ಪರ್ಯಾರ್ಥ

ಅಂಗದ ಕಳೆಯಲೊಂದು ಲಿಂಗವ ಕಂಡೆ.
ಲಿಂಗದ ಕಳೆಯಲೊಂದು ಅಂಗವ ಕಂಡೆ.
ಅಂಗ ಲಿಂಗವೆಂಬ ಸಂದಳಿಯುದೆ, ಅರಸಿ ಕಂಡೆನು ನೋಡಿರೆ!
ಇಲ್ಲಿ ಐದಾನೆ ಶಿವ ದೇವನು! ಇಲ್ಲಿ ಐದಾನೆ ಮಹಾದೇವನು!
ಬಲ್ಲಡೆ ಇರಿಸಿಕೊಳ್ಳಿರೆ.
ಕಾಯವಳಿಯದ ಮುನ್ನ ನೋಡಬಲ್ಲಡೆ,
ಗೋಹೇಶ್ವರನೆಂಬ ಲಿಂಗಕ್ಕೆ ಬೇರೊಂದು ಕಡೆಯುಂಟೆ ಹೇಳಿರೆ?[೩೧]

ಭಾವಲಿಂಗಸ್ಥಲದ ವಚನ

ತಮ್ಮ ತಮ್ಮ ಭಾವಕ್ಕೆ ಉಡಿಯಲ್ಲಿ ಕಟ್ಟಿಕೊಂಡರು.
ತಮ್ಮ ತಮ್ಮ ಭಾವಕ್ಕೆ ಕೊರಳಲ್ಲಿ ಕಟ್ಟಿಕೊಂಡರು.
ನಾನೆನ್ನ ಭಾವಕ್ಕೆ ಪೂಜಿಸ ಹೋದರೆ,
ಕೈ ತಪ್ಪಿ ಮನದಲ್ಲಿ ಸಿಲುಕಿತೆನ್ನ ಲಿಂಗ.
ಸಾಧಕನಲ್ಲ, ಬೇಧಕನಲ್ಲ
ಗೂಹೇಶ್ವರ ಅಲ್ಲಯ್ಯ ತಾನೆ ಬಲ್ಲ.[೨]

ಎಲ್ಲರೂ ಲಿಂಗವನೆ ಧರಿಸಿಕೊಂಡು ಲಿಂಗಾರ್ಚನೆಯ ಮಾಡುವ ಪರಿಯಲ್ಲಿ ಶಿವಯೋಗಿಯ ಪರಿಯ ಮತ್ತೆಂತೆಂದಡೆ, ಮನ ಮುಟ್ಟಿ ಪೂಜಿಸ ಹೋಗಿ ಆ ಮನವೆ ಲಿಂಗವೆಂದರಿದು ಅಸಾಧ್ಯ ಸಾಧಕನಾಗಿಪ್ಪ ಕಾರಣ, ನಾನೆನ್ನ ಭಾವಕ್ಕೆ ಪೂಜಿಸ ಹೋದರೆ, ಕೈ ತಪ್ಪಿ ಮನದಲ್ಲಿ ಸಿಲುಕಿತೆನ್ನ ಲಿಂಗವೆಂಬ ಶಬ್ದಕ್ಕರ್ಥ ಇಂತಪ್ಪ ಶಿವಯೋಗಿ ಅಭ್ಯಾಸಿಯಲ್ಲದೆ ನಿಜಯೋಗಿಯಾದ ಕಾರಣ ಸಾಧಕನಲ್ಲ ಬೇಧಕನಲ್ಲವೆಂಬ ಶಬ್ದಕ್ಕರ್ಥ.

ಭಾವಾಗಮಸ್ಥಲದ ವಚನ

ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷ ಗಂಗೆಯ ಮಿಂದಡಿಲ್ಲ
ಮೇರುಗಿರಿಯ ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ
ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ ನೆನೆವ ಮನವ
ಅಂದಂದಿಂಗೆ ಅತ್ತಲಿತ್ತ ಹರಿವ ಮನವ
ಚಿತ್ತದಲ್ಲಿ ನಿಲ್ಲಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರ ಲಿಂಗವು[೩]

ಅನೇಕ ಗಂಗೆಯ ಮಿಂದು ಜಪತಪ ನಿತ್ಯ ನೇಮಂಗಳ ಮಾಡಿದರೆ ಅಗೋಚರ ಪರಬ್ರಹ್ಮವು ಕಾಣಲಾರದು. ಮತ್ತೆಂತು ಕಾಣಬೇಕೆಂದರೆ ಮನದ ವ್ಯಾಕುಲಮಾದು ನಿಜರಿವು ಸಾಧ್ಯವಾದಡೆ ಆತನೇ ಶಿವ ಶರಣನೆಂಬೀ ವಚನದಾರ್ಥ.

ತಾನು ಶಿವಜ್ಞಾನ ಸಂಪನ್ನನಾದಡೆ ಲೋಕದ ಅಜ್ಞಾನಿಗಳು ತನ್ನನೇನೆಂದಡೆಯೂ ತಾನದನೇನೆಂದೂ ಅರಿಯದೆ, ಮಹಾ ಗಂಭೀರವಾಗಿರಬೇಕೆಂಬುದೀಗ ಈ ಕೆಳಗಿನ ವಚನದ ತಾತ್ಪರ್ಯ.

ಲೋಕ ಒಂದನೆಂದಡೆ ತಾನೊಂದನೆನ ಬೇಡ
ಮತ್ತರೇನನೆಂದಡೆಯೂ ತನ್ನರೆಂದರೆನಬೇಡ.
ಭೈತ್ರಕ್ಕೆ ಬೆಂಗುಂಡನಿಕ್ಕಿದಂತಿರಬೇಕು
ಹಿರಿಯರು ಗುಹೇಶ್ವರಾ[೪]

ಭಾಜನಸ್ಥಲದ ವಚನ

ಪರಿಪೂರ್ಣ ಪ್ರಸಾದಿಯ ಪರಿಪೂರ್ಣವೆಂಬಂಗ ಭಾಜನರಲ್ಲಿ ಪರಿಪೂರ್ಣ ಬೋನವಳವಡಲು, ಅಲ್ಲಿ ಪರಿಪೂರ್ಣ ರೂಪು ಅರ್ಪಿತವಾದ ಪ್ರಸಾದವ ಕೊಂಬುದೀಗ ಗುರು ಪ್ರಸಾದ ಇಂತಪ್ಪ ಶರಣನ ಪರಿಪೂರ್ಣ ಪ್ರಾಣದ ಅಂಗಭಾಜನದಲ್ಲಿ ಪರಿಪೂರ್ಣ ರುಚಿ ಅಳವಡಲು, ಆ ಪ್ರಸಾದವ ಕೊಂಬುದೀಗ ಲಿಂಗಪ್ರಸಾದ. ಈ ತೆರನ ಇಂತಪ್ಪ ಶರಣನೆ ಬಲ್ಲನೆಂಬುದೇ ಈ ಕೆಳಗಿನ ವಚನದ ಸಾರಾಂಶ.

ಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು,
ಗುರುಲಿಂಗವಾರೋಗಣೆಯ ಮಾಡಿ, ಮಿಕ್ಕುದು ಪ್ರಸಾದ.
ಈ ತೆರೆದ ಘನವಪ್ಪ ಲಿಂಗವನು ಒಂದುನುವಿನಲ್ಲಿ ತಂದಿರಿಸಿ,
ಘನವಪ್ಪ ಬೋನವನು ಲಿಂಗವಾರೋಗಣೆಯ ಮಾಡಿ.
ಮಿಕ್ಕುದ ಕೊಳಬಲ್ಲಡೆ ಪ್ರಸಾದಿ.
ಇಂತೀ ತೆರನ ಬೆಸಗೊಳಬಲ್ಲಡೆ.
ಎನ್ನ ಬೆಸಗೊಳ್ಳಯ್ಯ ಗೊಹೇಶ್ವರಾ[೩೫]

ಜ್ಞಾನಶೂನ್ಯಸ್ಥಲದ ವಚನ

ಅರಿವರತು ಬೆರಗು ಹತ್ತಿತ್ತೆಂಬ ಜ್ಞಾನವಿದೇನೋ?
ನಾಹಂ ಎಂಬಲ್ಲಿ ತಾನಾರು? ಕೋಽಹಮೆಂಬಲ್ಲಿ ಮುನ್ನಾರು?
ಪರಬ್ರಹ್ಮ ಸೋಽಹವೆಂಬಲ್ಲಿ ಮುನ್ನ ತಾನೇನಾಗಿದ್ದನೊ?
ಚಿದಽಹಂ ಎಂಬ ಹಮ್ಮಿನ ಭವಮಾಲೆಯದೇನೊ ಹೇಳಾ?
'ನಶ್ಯಬ್ದಂ ಬ್ರಹ್ಮ ಉಚ್ಯತೇ' ಉಂಬ ಶಬ್ದವಿಡಿದು
ಬಳಲುವ ಕಾರಣವಿದೇನು ಹೇಳಾ ಗೊಹೇಶ್ವರಾ?[೩೬]

ಲಿಂಗವೆ ತಾನಾಗಿ, ತನ್ನ ನಿಜವೆಂದರಿದು, ಅರಿವಡಗಿ ಬೆರಸಿದ ಲಿಂಗೈಕ್ಯನು ತನ್ನ ಲಿಂಗಪಥವ ವಿವರಿಸಿ ನುಡಿದರೆ ಅದೇ ಭಿನ್ನವೆಂದರಿದು ನಾಹಂ ಎನ್ನದೆ ಕೋಽಹಂ ಎನ್ನದೆ ಚಿದಹಂ ಎನ್ನದೆ ಇರಬೇಕು. 'ನಶ್ಯಬ್ದಂ ಬ್ರಹ್ಮ ಉಚ್ಯತೆ' ಎಂಬ ಶಬ್ದವ ನುಡಿಯದೆ ಇರಬೇಕೆಂಬುದೀ ವಚನದ ಸಾರಾಂಶ.

೩. ಸಕಲ ಪುರಾತನರ ವಚನ

"ಸಕಲ ಪುರಾತರ ವಚನ" ಹೆಸರಿನ ಈ ಕೃತಿ ವಚನ ಸಂಕಲನ ಪ್ರಕಾರಕ್ಕೆ ಸಂಬಂಧಿಸಿದೆ. ಇದರಲ್ಲಿ ೨೯ ವಚನಕಾರ-ವಚನಕಾರ್ತಿಯರ ೧೫೯ ವಚನ ಮತ್ತು ಒಂದು ಸ್ವರ ವಚನವಿದೆ. ಈ ಸಂಕಲನದಲ್ಲಿ ಪ್ರಾಚೀನವಾದವು. ಜೇಡರ ದಾಸಮಯ್ಯನ ವಚನಗಳು, ಉಳಿದವು ತೊಂಟದ ಸಿದ್ದಲಿಂಗನ

ವಚನಗಳನ್ನೂ ಬಿಟ್ಟರೆ ಮಿಕ್ಕವೆಲ್ಲಾ ಬಸವಾದಿ ಸಮಕಾಲೀನರವೇ ಆಗಿದ್ದು, ಇದರಲ್ಲಿ ಮೂವರು ಶಿವಶರಣೆಯರಿದ್ದಾರೆ.

ಈ ಹಸ್ತಪ್ರತಿಯು : ೧೩ ರಿಂದ ೨೬ ಎ ವರೆಗಿನ ಗರಿಗಳಲ್ಲಿಯ ವಚನ ಸ್ವರ ವಚನಗಳನ್ನು ಮಹಾಲಿಂಗದೇವನ (ಸು:೧೪೩೦) "ಏಕೋತ್ತರ ಶತಸ್ಥಲ"ದಿಂದ ಉದ್ದರಿಸಲಾಗಿದೆ. ಪ್ರಸ್ತುತ ಒಲೆಪ್ರತಿ ಚಿತ್ರದುರ್ಗದ "ಮುರುಘಾಮಠದ" ಹಸ್ತಪ್ರತಿ ಸಂಗ್ರಹದಲ್ಲಿದ್ದು ಇದರ ಕಮಾಂಕ ೭೦೧:೩ ಇದರಲ್ಲಿ ೫೮ ಗರಿಗಳಿವೆ. ಕೃತಿಯ ಆದಿಯಲ್ಲಿ "ಶ್ರೀ ವಿರೂಪಾಕ್ಷನೆ ಗತಿ ಶುಭಮಸ್ತು" ಎಂದಿದೆ. ಈ ವಚನಗಳಲ್ಲಿ ಆಯ್ದುಕೊಂಡು ಬರೆದಿದ್ದಾನೆ.

ಅಡಗ ತಿಂಬರಯ್ಯ ಕಣಕದಡಿಗೆಯಿದ್ದಂತೆ,
ಸುರೆಯ ಕುಡಿವರಯ್ಯ ಹಾಲಿದ್ದಂತೆ,
ಮುಕ್ಕವರಯ್ಯ ಭಂಗಿಯ ಸಕ್ಕರೆಯಿದ್ದಂತೆ.
ಸ್ವಸ್ತ್ರೀಯಿದ್ದಂತೆ ಪರಸ್ತ್ರೀಗಳೂಪ್ಪವ
ಸತ್ತ ನಾಯಿ ಭಕ್ಷಿಸುವ ಹಡಿಕರನೇನೆಂಬೆನಯ್ಯ ರಾಮನಾಥ[೩೭]

ಸಮಾಜದಲ್ಲಿ ನಾವೇ ನಿಜವಾದ ಭಕ್ತರೆಂದು ಹೇಳಿಕೊಳ್ಳುವವರು ತಾವು ಮಾಡುವ ತಪ್ಪನ್ನು ತಪ್ಪಲ್ಲ ಎಂದು ವಾದಿಸುವುದನ್ನು ಈ ವಚನದಲ್ಲಿ ತಿಳಿಸಲಾಗಿದೆ. ಹಾಲೆಂದು ಮದ್ಯೆಯ ಕುಡಿವರು. ಸಕ್ಕರೆ ಮುಕ್ಕುವಂತೆ ಭಂಗಿಯನ್ನು ಸೇದುವರು ಎಂದು ಭಕ್ತರ ವಿಮರ್ಶೆ ಮಾಡುವುದೇ ಜೇಡರ ದಾಸಿಮಯ್ಯನ ಈ ಮೇಲಿನ ವಚನದ ತಾತ್ಪರ್ಯ.

ಹೋಗವಿಟ್ಟು ಹಿಂದೆ ತಿರುಗಿ ನೋಡಿ ಆಗಬೇಕೆಂಬ ಸಂದೇಹವುಳ್ಳರೆ
ಅದೇ ಪಾರದ್ವಾರ, ಅದೇ ಪಂಚಮಹಾಪಾತಕ
ಎನಗನ್ಯ ಸ್ತ್ರೀಯೆಂಬುದು ನಿಮ್ಮ ರಾಣಿವಾಸವಯ್ಯ
ಎನಗಿದೆ ದಿಬ್ಬವಯ್ಯ ಕೂಡಲ ಸಂಗಮದೇವ[೩೮]

ನಮ್ಮ ಜೊತೆಯಲ್ಲಿರುವಾಗಲೇ ಅವರ ಬಗ್ಗೆ ತಪ್ಪು ಮತಾನಡದೆ. ಅವರು ಹೋದ ಮೇಲೆ ಅವರ ಬಗ್ಗೆ ಕೆಟ್ಟದಾಗಿ ಮಾತನಾಡಿಕೊಳ್ಳುವುದು ಪಂಚ ಮಹಾಪಾತಕ ಮಾಡಿದಂತೆ ಎಂದು ಈ ವಚನ ತಿಳಿಸುತ್ತದೆ.

ಅಮತೃ ಸಾಗರದೊಳಗಿರ್ದು ಆಕಳ ಚಿಂತೆಯೇಕೆ?
ಮೇರು ಮಂದಿರದೊಳಗಿರ್ದು ಜಲಗ ತೊಳೆವ ಚಿಂತೆಯೇಕೆ?
ಶ್ರೀ ಗುರುವಿನೊಳಗಿರ್ದು ತತ್ತ್ವ ವಿದ್ಯೆಯ ಚಿಂತೆಯೇಕೆ?

ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆಯೇಕೆ?

ಶರಸ್ಥಲದಲ್ಲಿ ಲಿಂಗವಿರ್ದ ಬಳಿಕ ಇನ್ನಾವ ಚಿಂತೆ ಹೇಳಾ ಗೊಹೇಶ್ವರಾ?[೭೯]

ನಾವು ಒಬ್ಬ ದೈವವನ್ನೇ ಭಜಿಸಿ ಅವರನ್ನೇ ನಂಬಿ ಅದರಲ್ಲಿಯೇ ತಲ್ಲೀನರಾಗಬೇಕು. ನೂರಾರು ದೇವರ ನಂಬಬಾರದು. ನಮ್ಮ ಅಂಗೈಯಲ್ಲಿ ಇಷ್ಟಲಿಂಗವಿರುವಾಗ ಬೇರೆ ದೇವರ ಮೊರೆ ಹೋದರೆ ಅಂತವರನ್ನು ಮೂರ್ಖರೆನ್ನುತ್ತೇವೆ. ಅಮೃತದ ಸಾಗರದಲ್ಲಿ ನಾವಿರುವಾಗ ಆಕಳ ಹಾಲಿನ ಚಿಂತೆಯೇಕೆ. ವಿದ್ಯಪರ್ವತ ಶ್ರೀ ಗುರುವಿನ ಅಭಯ ಹಸ್ತ ನಮಗಿರುವಾಗ ತತ್ತ್ವ, ವೇದ, ಪುರಾಣಗಳ ಚಿಂತೆಯೇಕೆ? ದೇವರ ಪ್ರಸಾದವೇ ನಮಗೆ ದೊರೆತಿರುವಾಗ ಮುಕ್ತಿಯ ಚಿಂತೆಯೇಕೆ ಎಂದು ದೃಷ್ಟಾಂತ ಕೊಡುವುದರ ಮೂಲಕ ಏಕದೇವೋಪಾಸನೆ ಬಗ್ಗೆ ತಿಳಿಸಿದ್ದಾರೆ.

**ಸಾರಾಂಶ**

ಯಾರು ಯಾವುದೇ ಕಾರ್ಯವನ್ನು ಮಾಡಲಿ ಅದರಲ್ಲಿ ಏಕಚಿತ್ತದಿಂದ ಎಡೆಬಿಡದೆ ಮಾಡಿದಾಗ ಅದರಿಂದ ಒಳ್ಳೆಯ ಫಲಸಿಗುತ್ತದೆ. ದೇವರನ್ನು ಪೂಜಿಸಲು ಯಾವುದೇ ದಿನ, ಹಗಲು ರಾತ್ರಿ ಎಂದೇನಿಲ್ಲ ಯಾವ ಸಮಯವಾದರೇನು ನಿರ್ಮಲ ಚಿತ್ತದಿಂದ ದೇವರನ್ನು ಪೂಜಿಸಿದರೆ ಬೇರೆ ಯಾವ ಕೆಟ್ಟಯೋಚನೆ ನನಗೆ ಸುಳಿಯದು. ನಿಮ್ಮನ್ನು ಅನವರತ ಪೂಜಿಸುತ್ತಿದ್ದರೆ ಬೇರೆಯದನ್ನು ಮರೆಯುತ್ತೇನೆ. ನಿಮ್ಮನ್ನು ಬಿಟ್ಟು ಬೇರೇನೂ ಇಲ್ಲ ಎಂಬುದೇ ಈ ಕೆಳಗಿನ ವಚನದ ಸಾರಾಂಶ.

ವಾರವೆಂದರಿಯೆ ದಿನವೆಂದರಿಯೆ

ಏನೆಂದರೆಯೆನಯ್ಯ.

ಇರುಳೆಂದರೆಯೆ ಹಗಲೆಂದರೆಯೆ

ಏನೆಂದರೆಯೆನಯ್ಯ.

ನಿಮ್ಮುವ ಪೂಜಿಸಿ ಅನ್ಯರ ಮರದೆ

ಕೂಡಲ ಸಂಗಮದೇವಯ್ಯ[೮೦]

ಈ ಬಾಹ್ಯ ಪ್ರಪಂಚದಲ್ಲಿ ನಾವು ಬಾಳುವವೆಂದು ಒಂದು ಮನೆಯಕಟ್ಟಿ ಅದು ನನ್ನದೆಂಬ ಭ್ರಮೆಯಿಂದ ಬದುಕುತ್ತಿದ್ದೇವೆ. ನಾಳೆ ನಮ್ಮ ದೇಹ ಐಕ್ಯವಾದರೆ, ನನ್ನದೆಂಬುದು ಇಲ್ಲಿ ಏನೂ ಇಲ್ಲ. ಇಂತಹ ದೇಹದ ಮೇಲೆ ಆಸ್ತಿಯ ಮೇಲೆ ನಮಗೇಕೆ ಮೋಹ. ಅದೆಂದೂ ನಮ್ಮದಲ್ಲ ಎಂಬುದನ್ನು ಕೆಲವು ದೃಷ್ಟಂತಗಳ ಮೂಲಕ ತಿಳಿಸಿದ್ದಾನೆ.

ಕಣ್ಣಿನಲ್ಲಿ ಮೀನು ಇದ್ದರೆ ಅದನ್ನು ಬಲೆಬೀಸಿ ಹಿಡಿಯಲು ಬರುತ್ತಿದೆಯೇ? ಅದೆಂದಿಗೂ ಸಾಧ್ಯವಿಲ್ಲ. ಹದ್ದು ಹಾವನ್ನು ಕಚ್ಚಿಕೊಂಡು ಮೇಲೆ ಹಾರುತ್ತಿದೆ. ಅದನ್ನು ಕಂಡು ಹಾವಾಡಿಗ ಹಾವನ್ನು

ಇಡಿಯುತ್ತೇನೆಂದು ಬುಟ್ಟಿ ತಯಾರಿಸಿದರೆ ಅದು ಮೂರ್ಖತನ. ಇದರಂತೆ ಮೊದಲು ನಮ್ಮನ್ನು ನಾವು ತಿಳಿದು ನಡೆಯಬೇಕೆಂದು ಕೋಲಶಾಂತಯ್ಯನವರು ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾರೆ.

ಕಣ್ಣಿನೊಳಗಣ ಮಚ್ಚಕ್ಕೆ ಬಲೆಯ ಬೀಸಿ
ಹದ್ದಿನ ಬಾಯ ಹಾವಿಂಗೆ ಹೇಳಿಗೆಯ ಮಾಡಿ
ಕಾಣಬಾರದ ಬಯಲಿಂಗೆ ಮನೆಯಕಟ್ಟಿ ಬಾಳುತ್ತಿದ್ದವನ ನಿನ್ನ ನೀನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗ ಸಂಗಾ[೧೧]

ಹುತ್ತದೊಳಗಣ ಹಾವ, ಮಡುವಿನೊಳಗಣ ಮಚ್ಛವ
ಮಹಾಕಾನನದ ವಾನರವ ಹಿಡಿವ ಪರಿಯಿನ್ನೆಂತೋ?
ಹುತ್ತವನೆಗೆದು ಮಡುವ ಹೂಳಿ ಕಾನನವ ತರೆದು ಇಂತಿವ ಇಡಿಯಬೇಕು
ಸಕಲೇಂದ್ರಿಯದೊಳಗಿದ್ದು ವಸ್ತುವನರೆಹಿದೆನೆಂಬ
ಮಿಟ್ಟಿಯ ಭಂಡರನೊಪ್ಪ ಏಣಾಂಕಧರ ಸೋಮೇಶ್ವರ ಲಿಂಗವು||[೬೨]

ಸಕಲ ಇಂದ್ರಿಯಗಳ ಆಸೆಗಳನ್ನು ತನ್ನಲ್ಲಿಟ್ಟುಕೊಂಡು, ಅವುಗಳನ್ನು ನಿಗ್ರಹಿಸಿದ್ದೇನೆ ಎಂದು ಹೇಳುವವರು ನಿಜವಾಗಿಯೂ ಇಂದ್ರಿಯಗಳನ್ನು ಗೆದ್ದಿರುವುದಿಲ್ಲ. ಅಂತವರನ್ನು ನಮ್ಮ ಸೋಮೇಶ್ವರದೇವ ಒಪ್ಪುವುದಿಲ್ಲ ಎಂದು ಬಿಬ್ಬ ಬಾಚಯ್ಯ ತನ್ನ ವಚನದಲ್ಲಿ ತಿಳಿಸಿದ್ದಾನೆ.

ಹುತ್ತದಲ್ಲಿನ ಹಾವು, ಮಡುವಿನಲ್ಲಿರುವ ಮೀನು, ಅರಣ್ಯದ ಕಪಿಗಳ ಹೇಗೆ ಹಿಡಿಯಬೇಕು ಎಂದರೆ ಹುತ್ತವ ಸಂಪೂರ್ಣ ಬಗೆಯಬೇಕು ಮಡುವನ್ನು ಹೂಳಿ ಅರಣ್ಯವ ತರೆದು ಹಿಡಿದಾಗ ಅವು ಸಿಗುತ್ತವೆ. ಅದರಂತೆ ನಮ್ಮ ಇಂದ್ರಿಯಗಳನ್ನು ನಿಗ್ರಹಿಸಬೇಕು ಎಂದು ಹೇಳುತ್ತಾನೆ.

ಹೆಂಗಲೊಲುಮೆಯೆಂಬುದು ಅಂಗಜನ ಅರಮನೆ
ಭಂಗ ಬಿಡುತ್ತೈದಾ ನೋಡಾ ತ್ರೈ ಜಗವೆಲ್ಲಾ
ಇದು ಕಾರಣ
ನಿಮ್ಮ ಶರಣರು ಲಿಂಗನೆನಹೆಂಬ ಕಿಚ್ಚ ಹಿಡಿಯಲು
ಅಂಗಜನರಮನೆ ಉರಿದು ಭವ ಹರೆ ಹಿಂಗಿತ್ತು ನೋಡಾ
ಇದೇ ಲಿಂಗದ ಒಲವು; ನಿಜೈಕ್ಯ ಪದ
ಉಳಿದವೆಲ್ಲಾ ಭ್ರಮೆ ಕಾಣಾ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ[೬೩]

ಸ್ತ್ರೀಯರ ಸಂಗವೆಂಬುದು ಕಾಮನ ಅರಮನೆ, ಪ್ರತಿಯೊಬ್ಬ ಮನುಷ್ಯನು ಕೂಡ ಹೆಣ್ಣಿನ ಅಂಗ ಸುಖವನ್ನು ಬಯಸಿ, ಸಂಸಾರವೆಂಬ ಪಾಪರೂಪದಲ್ಲಿ ಬಿದ್ದು ಪಡಬಾರದ ಕಷ್ಟ ಪಡುತ್ತಿದ್ದಾರೆ.

ಶರಣರ ಲಿಂಗವೆಂಬ ಬೆಂಕಿಯು ಆ ಕಾಮದ ಅರಮನೆಯನ್ನು ಸುಟ್ಟು ಹಾಕುತ್ತದೆ. ಶರಣರ ಸಂಗ, ಶರಣರ ಸೂಳ್ನುಡಿಯನ್ನು ಕೇಳಿದಾಗ ಮಾತ್ರ ಈ ಕ್ಷಣಿಕ ಸುಖದ ಮಾಹೆ ಮರೆಯಲು ಸಾಧ್ಯ. ಕಾಮದ ಅರಮನೆ ಸುಟ್ಟು ಭಸ್ಮವಾದಾಗ ಮರುಹುಟ್ಟುವಿನ ಚಿಂತೆ ತೀರುತ್ತದೆ. ಇದೇ ಲಿಂಗದ ಮಹಿಮೆ. ಈ ಲಿಂಗಸಂಗವನ್ನು ಬಿಟ್ಟು ಉಳಿದಿದ್ದು ಕೇವಲ ಭ್ರಮೆ ಎಂದು ತೋಟದ್ದೇವರು ಈ ಮೇಲಿನ ವಚನದಲ್ಲಿ ತಿಳಿಸಿದ್ದಾರೆ.

ಮನಸ್ಸು ನಿಷ್ಕಾಮಶವಾಗಿರಬೇಕು. ಹೊರಗಡೆ ಯೋಗಿಯಂತೆ ಕಂಡು ಒಳಗಡೆ ಬೋಗಿಯಾಗಿರುವವರನ್ನು ದೇವರು ಮೆಚ್ಚ. ಅನ್ನ, ಆಹಾರ, ನಿದ್ರೆ ಬಿಟ್ಟು ಸುಮ್ಮನೆ ಜಪ ತಪ ಮಾಡಿದರೆ ಫಲವಿಲ್ಲ. ಅದು ಕೇವಲ ದೈಹಿಕದಂಡನೆಯಾಗುತ್ತದೆ. ಮೊದಲು ಜ್ಞಾನ ಪಡೆಯಬೇಕು. ಇಂದ್ರಿಯಗಳನ್ನು ನಿಗ್ರಹಿಸದೆ, ಆತ್ಮವ ಬಂಧಿಸಿದರೆ ಪ್ರಯೋಜನವಿಲ್ಲ. ಅದು ಆತ್ಮದ್ರೋಹವಾಗುತ್ತದೆ. ದೇಹಕ್ಕೆ ಶಿಕ್ಷೆ ಕೊಡುವುದರಿಂದ ಏನೂ ಪ್ರಯೋಜನವಿಲ್ಲ. ಮೊದಲು ನಮ್ಮ ಮನಸ್ಸಿನಲ್ಲಿನ ಕೊಳೆಯನ್ನು ತೊಳೆಯಬೇಕು. ಅದು ಹೋಗದೆ ಬರೀ ದೇಹ ತೊಳೆದರೆ ಭವ ಹಿಂಗದು. ಒಂದು ವೇಳೆ ಜಪ ತಪಗಳಿಂದಲೇ ಸಿದ್ಧಿ ಸಿಕ್ಕಿತ್ತೆಂದುಕೊಂಡರೆ, ಅಂಥಹ ಭಂಡರನ್ನು ನಮ್ಮ ಶಿವಸಿದ್ದೇಶ್ವರ ಒಪ್ಪುವುದಿಲ್ಲ ಎಂದು ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾರೆ.

ಅರುಹಿನ ಕುರುಹನರಿಯದೆ
ತನುವ ಕರಗಿಸಿ ಮನವ ಬಳಲಿಸಿದರೇನು ಪ್ರಯೋಜನ?
ಇಂದ್ರಿಯಂಗಳ ನಿಗ್ರವ ಮಾಡಿ
ವಿಷಯಂಗಳ ಬಂಧಿಸಿ
ಆತ್ಮಂಗೆ ಬಂಧನವ ಮಾಡಿದರೆ
ಆತ್ಮ ದ್ರೋಹ ಕಾಣಿಭೋ
ಹೀಂಗೆ ಉದ್ದೇಶದಿಂದ ತನುವ ಒಣಗಿಸಿದರೆ
ಹಸಿಯ ಮರನ ತರೆದು ಬಿಸಿಲಿಗೆ ಹಾಕಿದಂತೆ
ತನು ಒಣಗಿದರೇನಯ್ಯ? ಮನವ ಮಲಿನ ಹಿಂಗದು
ಮನದ ಮಲಿನ ಹಿಂಗದನ್ನಕ್ಕರ
ಭವ ಹಿಂಗಿತೆಂಬ ಭಂಡರವೇನೆಂಬೆಯ್ಯ?
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ?|[೪೪]

ಕೊತ್ತಿಗೆ ಕೊಂಬು ಹುಟ್ಟಬಲ್ಲುದೇ?
ನುಚ್ಚಕ್ಕಿ ಮೊಳೆಯ ಬಲ್ಲುದೆ?

ಸತ್ತಮರ ಎಳಕ ಬಲ್ಲುದೆ?
ಅರೆಯ ಮೇಲೆ ತಾವರೆ ಬೆಳೆಯಬಲ್ಲುದೆ? ಅಯ್ಯ?
ದುರ್ಬುದ್ಧಿ ಮಾನವರ ಭಾವದಲ್ಲಿ
ಶಿವಜ್ಞಾನ ಕರೆಗೊಳ್ಳಬಲ್ಲುದೇ ಅಯ್ಯ
ಶಿವಜ್ಞಾನವಿಲ್ಲದವರಿಗೆ ಶಿವಕೃಪೆಯೆಲ್ಲಿಯದೊ?
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ![೮೯]

ದುರ್ಬುದ್ಧಿ ಉಳ್ಳವರಿಗೆ ಶಿವಜ್ಞಾನ ದೊರೆಯುವುದಿಲ್ಲ. ಮನದಲ್ಲಿ ಕೆಟ್ಟದ್ದನ್ನೇ ತುಂಬಿಕೊಂಡಿದ್ದರೆ, ಅಂತವರಿಗೆ ಶಿವನನ್ನು ಅರಿಯುವುದು ಮತ್ತು ಶಿವಜ್ಞಾನ ದೊರೆಯುವುದು ತುಂಬಾ ಕಷ್ಟ. ಆ ದಿವ್ಯ ಜ್ಞಾನವೇ ದೊರೆಯದಿದ್ದರೆ ಶಿವನನ್ನು ಒಲಿಸಿಕೊಳ್ಳುವ ಪರಿಯೆಂತು? ಶಿವನನ್ನು ಒಳಿಸಿಕೊಳ್ಳಲು ಸಾಧ್ಯವೇ ಇಲ್ಲ ಎಂಬುದನ್ನು ಕೆಲವು ಪ್ರಾಣಿಗಳ ನಿದರ್ಶನ ನೀಡಿ ತಿಳಿಸಿದ್ದಾನೆ. ಬೆಕ್ಕಿಗೆ ಎಂದಾದರೂ ಕೊಂಬು ಬೆಳೆಯುತ್ತವೆಯೇ? ಅದು ಸಾಧ್ಯವಿಲ್ಲ. ಪೂರ್ಣ ಇರುವ ಭತ್ತ ಮೊಳಕೆ ಬರುತ್ತದೆ. ಅದರಲ್ಲಿಯೂ ನುಚ್ಚು ಅಕ್ಕಿಯನ್ನು ಬಿತ್ತಿದರೆ ಅದು ಮೊಳಕೆ ಬರುವುದೇ ಅದೂ ಸಾಧ್ಯವಿಲ್ಲ. ಕಡಿದ ಮರ ಒಣಗಿ ಹೋಗಿದೆ ಅದನ್ನು ಮತ್ತೆ ನೆಟ್ಟರೆ ಅದು ಚಿಗುರುತ್ತದೆಯೇ?

ತಾವರೆ ನೀರಿನಲ್ಲಿ ಬೆಳೆಯುವುದು ಸಹಜ. ಅದು ಬಿಟ್ಟು ಬಂಡೆಯ ಮೇಲೆ ಬೆಳೆಯಲು ಸಾಧ್ಯವೇ? ಇವೆಲ್ಲವೂ ಹೇಗೆ ಅಸಾಧ್ಯವೋ ಅದೇ ರೀತಿ ಕೆಟ್ಟ ಗುಣವುಳ್ಳವರಿಗೆ ಶಿವನ ಕೃಪೆ ದೊರೆಯುವುದು ಅಸಾಧ್ಯ.

ಬೇರೆಯವರಿಗೆ ಪರತತ್ವ ವೇದ, ಪುರಾಣ, ಶಾಸ್ತ್ರಗಳನ್ನು ಹೇಳುತ್ತಾ ತಾವು ಮಾತ್ರ ಮಾಡಬಾರದ ಅನಾಚಾರಗಳನ್ನು ಮಾಡುತ್ತಿದ್ದರೆ, ಅಂತವರಿಗೆ ಶಿವನೊಲಿಯನು. ಅಂತವರ ಮಾತುಗಳು ಮಾತಾಗಿ ತಿಳಿಯುತ್ತವೆ. ಅವು ಕೃತಿಯಾಗವು. ಪರಸ್ತ್ರೀಯ ಸಂಗ ಮಾಡಬೇಡಿ ಎಂದು ಹೇಳುವವರೆ ಸ್ತ್ರೀ ಸಂಗ ಮಾಡಿದರೆ ಅಂತವರು ಮಾದರಿಯಾಗಲಾರರು ಎಂಬುದೇ ಈ ವಚನದ ತಾತ್ಪರ್ಯ.

ಬ್ರಹ್ಮನ ಮಾತನಾಡಿ
ಕನ್ನೆಯರ ಕಾಲದೆಸೆಯಲ್ಲಿ ಕುಳಿತರೆ
ಪರಬೊಮ್ಮರ ಮಾತು ಅಲ್ಲಿಯೇ ನಿಂದಿತ್ತೆಂದನಂಬಿಗ ಚವುಡಯ್ಯ[೯೦]

ನೆರೆಮನೆಯಲ್ಲಿ ಸಿರಿಯಿದ್ದರೆ ಕಾರಣವೇನು?
ಪುರಾತರ ವಚನವನೋದಿದಲ್ಲಿ ಫಲವೇನು?
ವಚನದಂತೆ ತಾವಿಲ್ಲ ತನ್ನಂತೆ ವಚನವಿಲ್ಲ

ಮೂಗಿಲ್ಲದವರು ಕನ್ನಡಿಯ ನೋಡಿದರೆ ಶೃಂಗಾರ ಮೆರವುದೆ

ದೇವರಾಯ ಸೊಡ್ಡಳಾ?[೪೭]

"ನುಡಿದಂತೆ ನಡೆ, ನಡೆದಂತೆ ನುಡಿ" ಎಂಬುದೇ ಈ ವಚನದ ತಾತ್ಪರ್ಯ. ಬೇರೆಯವರಲ್ಲಿ ಹಣವಿದ್ದರೆ ಅದರ ಬಗ್ಗೆ ನಮಗೇಕೆ ಚಿಂತೆ. ಅದು ಹೇಗೆ ಬಂದಿತೆಂದು ಕಾರಣವ ಹುಡುಕಲೂಬಾರದು. ವೇದ ತಿಳಿಯಲು ಸಾವಿರಾರು ಪುರಾತರ ವಚನವ ಓದಿದರೆ ಫಲವೇನು, ಅದರಂತೆ ನಾವು ನಡೆಯದ ಬಳಿಕ. ವಚನ ಹೇಳುವ ಹಾಗೆ ನಾವಿಲ್ಲ, ನಾವಿರುವಂತೆ ವಚನ ರಚನೆಯಾಗಿಲ್ಲ. ನಾವು ಸೌಂದರ್ಯ ಯುತವಾಗಿ ಕಾಣಬೇಕೆಂದರೆ ನಮ್ಮ ಅಂಗಾಂಗಗಳು ಸರಿ ಇರಬೇಕು. ಅದು ಬಿಟ್ಟು ನಾವು ನೋಡಿಕೊಳ್ಳುವ ಕನ್ನಡಿ ಹೇಗಿದ್ದರೇನು ಅದು ಇರುವುದನ್ನೇ ತೋರುತ್ತದೆ. ಅದರಂತೆ ನಾವು ತಿಳಿದ ಜ್ಞಾನಿಗಳಾಗಬೇಕೇ ವಿನಃ, ಡಾಂಬಿಕ ಜ್ಞಾನಿಗಳಾಗಬಾರದು. ಆಗಾದಾಗ ಮಾತ್ರ ನಮಗೆ ನಿಜವಾದ ಗೌರವ ದೊರೆಯುವುದು ಎಂಬುದೇ ಇದರ ಅರ್ಥ.

**ಅಡಿಟಿಪ್ಪಣಿಗಳು**

೧. ಶಿವಣ್ಣ ಎಸ್.(ಸಂ), **ವಚನ ಸಂಕಲನ, ಸಂಪುಟ ೩,** ವೀರಶೈವ ಅಧ್ಯಯನ ಸಂಸ್ಥೆ ಗದಗ, ೧೯೯೧, ಪು.೪

೨. ಅದೇ, ಪು.೧೦

೩. ಅದೇ, ಪು.೧೦

೪. ಅದೇ, ಪು.೧೨

೫. ಅದೇ, ಪು.೩

೬. ಅದೇ, ಪು.೧೬

೭. ಅದೇ, ಪು.೨೩

೮. ಅದೇ, ಪು.೩೦

೯. ಅದೇ, ಪು.೪೪

೧೦. ಅದೇ, ಪು.೪೭

೧೧. ಅದೇ, ಪು.೫೦

೧೨. ಅದೇ, ಪು.೫೩

೧೩. ಅದೇ, ಪು.೫೯

೧೪. ಅದೇ, ಪು.೬೦

೧೫. ಅದೇ, ಪು.೬೧

೧೬. ಶಿವಣ್ಣ ಎಸ್.(ಸಂ), ವಚನ ಸಂಕಲನ, ಸಂಪುಟ ೪, ವೀರಶೈವ ಅಧ್ಯಯನ ಸಂಸ್ಥೆ ಗದಗ, ೧೯೯೨, ಪು.೩, ೪, ೫

೧೭. ಅದೇ, ಪು.೯,೧೦.೧೧

೧೮. ಅದೇ, ಪು.೧೬

೧೯. ಅದೇ, ಪು.೧೮

೨೦. ಅದೇ, ಪು.೨೦

೨೧. ಅದೇ, ಪು.೨೨

೨೨. ಅದೇ, ಪು.೨೪

೨೩. ಅದೇ, ಪು.೨೫

೨೪. ಅದೇ, ಪು.೩೧

೨೫. ಅದೇ, ಪು.೩೩

೨೬. ಅದೇ, ಪು.೩೩

೨೭. ಅದೇ, ಪು.೩೪

೨೮. ಅದೇ, ಪು.೩೭

೨೯. ಅದೇ, ಪು.೩೭, ೩೮

೩೦. ಅದೇ, ಪು.೩೯

೩೧. ಅದೇ, ಪು.೫೭

೩೨. ಅದೇ, ಪು.೬೫

೩೩. ಅದೇ, ಪು.೭೦

೩೪. ಅದೇ, ಪು.೭೫

೩೫. ಅದೇ, ಪು.೧೦೪

೩೬. ಅದೇ, ಪು.೧೦೬, ೧೦೭

೩೭. ಅದೇ, ಪು.೧೧೩, ೧೧೪

೩೮. ಅದೇ, ಪು.೧೧೪

೩೯. ಅದೇ, ಪು.೧೧೮

೪೦. ಅದೇ, ಪು.೧೨೦

೪೧. ಅದೇ, ಪು.೧೩೩

೪೨. ಅದೇ, ಪು.೧೩೩

೪೩. ಅದೇ, ಪು.೧೪೨

೪೪. ಅದೇ, ಪು.೧೫೩

೪೫. ಅದೇ, ಪು.೧೬೧, ೧೬೨

೪೬. ಅದೇ, ಪು.೧೭೪

೪೭. ಅದೇ, ಪು.೧೭೪

೭

# ಹೊಸ ವಚನಗಳು

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವಚನ ಸಾಹಿತ್ಯವೂ ಒಂದು. ಈ ಸಾಹಿತ್ಯವು ಜೇಡರ ದಾಸಿಮಯ್ಯ, ಸಕಲೇಶ ಮಾದರಸ, ಡೋಹರ ಕಕ್ಕಯ್ಯನವರಂತಹ ಆದ್ಯ ವಚನಕಾರರಿಂದ ಬೆಳೆಯುತ್ತಾ ಹೋಯಿತು. ವಚನ ಸಾಹಿತ್ಯವು ಬೆಳೆಯುತ್ತಾ ಹೋದಂತೆ, ಅನೇಕ ಹೊಸ ಹೊಸ ವಚನಗಳು ಸೃಷ್ಟಿಯಾದವು. ಇಂತಹ ವಚನಗಳಲ್ಲಿ ಕೆಲವು ಬೆಳಕಿಗೆ ಬಂದವು. ಇನ್ನೂ ಅನೇಕ ವಚನಗಳು ಬೆಳಕಿಗೆ ಬರಲೇ ಇಲ್ಲ.

ವೀರಶೈವ ಕವಿಗಳು ಕನ್ನಡ ಸಾಹಿತ್ಯಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ವಚನಗಳಲ್ಲಿ ಹೊಸ ಹೊಸ ರೀತಿಯ ವಿಧಾನಗಳನ್ನು ಅನುಸರಿಸಿ ವಿಶಿಷ್ಟವಾದ ಮಾರ್ಗವನ್ನು ಹಾಕಿಕೊಟ್ಟಿದ್ದಾರೆ. ಹಸ್ತಪ್ರತಿಗಳೆಂದರೆ ವೀರಶೈವರಿಗೆ ದೇವಸಮಾನ. ಅವುಗಳನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಕಂಡರು. ಅದಕ್ಕಾಗಿಯೇ ಹಸ್ತಪ್ರತಿ ಸಂಗ್ರಹಣೆ ಮತ್ತು ಹಸ್ತಪ್ರತಿ ಭಂಡಾರಗಳು ತಲೆ ಎತ್ತಿ ಹಸ್ತಪ್ರತಿ ಸಂಗ್ರಹದಲ್ಲಿ ತೊಡಗಿದವು.

ಹೊಸ ವಚನಗಳು ಎಂಬ ಕೃತಿಯಲ್ಲಿ ಶಿವಣ್ಣನವರು ಹನ್ನೊಂದು ಜನ ವಚನಕಾರ ಮತ್ತು ವಚನಕಾರ್ತಿಯರ ಇದುವರೆಗೂ ದೊರೆತಿಲ್ಲದ ಕೆಲವು ವಚನಗಳನ್ನು ಹಸ್ತಪ್ರತಿಗಳ ಸಹಾಯದಿಂದ ಪತ್ತೇಹಚ್ಚಿ ಈ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಇಲ್ಲಿ ಮೊದಲು ವಚನಕಾರರ ಪರಿಚಯವನ್ನು ನೋಡುತ್ತಾ ಅವರ ವಚನಗಳ ವಿಶ್ಲೇಷಣೆ ಮತ್ತು ಸಾರಾಂಶವನ್ನು ತಿಳಿಯೋಣ.

### ೧. ಸಕಲೇಶ ಮಾದರಸ(೧೧೩೦)

೧೨ನೇ ಶತಮಾನದ ಪೂರ್ವಾರ್ಧದಲ್ಲಿದ್ದ ಸಕಲೇಶಮಾದರಸ ಬಸವಾದಿಗಳ ಹಿರಿಯ ಸಮಕಾಲೀನ. ತಂದೆ ಕಲ್ಲುಕುರ್ಕೆಯ ಶಿವಯೋಗಿ ಮಾದರಸ ವಿವಿಧ ರೀತಿಯ ವೀಣೆಗಳ ಭಾಜನಾ ನಿಷ್ಣಾತ. ಶಿಷ್ಯರು ಚಿಕ್ಕಮಾದಣ್ಣ, ವೀರವ್ರತ ಗೋಪೆಯ ಶಿವದೇವ ಹಾಗೂ ಮಹಾಲಿಂಗ ರಾಮವೀರ.

“ಸಕಲೇಶ್ವರ” ಅಂಕಿತದ ೧೩೪ ವಚನಗಳು ಪ್ರಕಟವಾಗಿವೆ. ಪ್ರಸ್ತುತ ಸಂಕಲನದಲ್ಲಿ ವಚನವೊಂದು ಪ್ರಕಟಗೊಂಡಿದೆ. ಈತನ ‘ತಂಗಾಳಿಗಗಲಿರು ಮರನೆ’ ಎಂಬ ಏಕೈಕ ಸ್ವರವಚನ ಉಪಲಬ್ಧವಿದ್ದು,

ಕಂಬಾಳ ಶಾಂತಮಲ್ಲೇಶನ (೧೬೦೦) ''ಗಣವಚನ ರತ್ನಾವಳಿ'' ಹಾಗೂ ಚೆನ್ನವೀರಾಚಾರ್ಯನ(೧೬೦೦) 'ಶಿವಯೋಗ ಪ್ರದೀಪಿಕೆ'ಗಳಲ್ಲಿ ಉಲ್ಲೇಖಗೊಂಡಿದೆ.

ಕ್ರಿ.ಶ.ಸು.೧೪೮೫ರಲ್ಲಿದ್ದ ಈತನ ವಂಶಜ ಪದ್ಮಣಾಂಕ ''ಪದ್ಮರಾಜ ಪುರಾಣವನ್ನು'' ರಚಿಸಿದ್ದು, ಅಲ್ಲಿ ಈತನ ಬಗೆಗೆ ಹಲವಾರು ಸಂಗತಿಗಳಿವೆ. ಶಂಕರ ದೇವ (೧೫೪೦) ಹಾಗೂ ಕಿರಿಯ ಸೋಮೇಂದ್ರರು (ಸು.೧೭೫೦) ರಗಳೆ, ಸಾಂಗತ್ಯಗಳಲ್ಲಿ ಈತನ ಬಗೆಗೆ ಕೃತಿಗಳನ್ನು ರಚಿಸಿದ್ದಾರೆ. ವಿಮರ್ಶಕರು ಈತನ ವಚನಗಳ ಪ್ರಭಾವ ಮುಂದಿನ ವಚನಕಾರರ ರಚನೆಗಳ ಮೇಲಾಗಿರುವುದನ್ನು ಈಗಾಗಲೇ ಗಮನಿಸಿದ್ದಾರೆ.

ಅಯ್ಯ ನಿಮ್ಮಲ್ಲಿ ಆಯುವ ಬೇಡುವೆನೆ?
ಸಂಸಾರಕ್ಕಾನುಂಜುವೆ
ಅಯ್ಯಾ ನಿಮ್ಮಲ್ಲಿ ಸ್ತ್ರೀಯ ಬೇಡುವೆನೆ?
ಪರಾಂಗನೆಯು ಪಾಪಾ
ಅಯ್ಯ ನಿಮ್ಮಲ್ಲಿ ಮುಕ್ತಿಯ ಬೇಡುವೆನೆ?
ಅದು ನಿಮ್ಮ ಪದವಿ
ಸಕಳೇಶ್ವರ ದೇವಾ
ನಾನೇನನೊಲ್ಲೆ ನಿಮ್ಮ ಶರಣರ ಸಂಗವಿದ್ದಡೆ ಸಾಕು.

ಪು-೧

ದೇವರೇ ನಾನು ನಿಮ್ಮಲ್ಲಿ ನನಗೆ ಬಹಳವರ್ಷ ಬದುಕಲು ಆಯುಷ್ಯ ಕೊಡು ಎಂದು ಕೇಳುವುದಿಲ್ಲ. ಏಕೆಂದರೆ ಅದರಲ್ಲಿ ಸಂಸಾರವೆಂಬ ಕೂಪದಲ್ಲಿ ಬಿದ್ದು ಪಡಬಾರದ ಕಷ್ಟಪಡಬೇಕಾಗುತ್ತದೆ. ನನಗೆ ಸ್ತ್ರೀ ಬೇಕೆಂದು ಕೇಳುವುದಿಲ್ಲ ಏಕೆಂದರೆ ಅದೊಂದು ಮಾಹೆ. ಪರಸ್ತ್ರೀಯ ಸಂಗ ಮಹಾಪಾಪ ನಾನು ನಿಮ್ಮಲ್ಲಿ ಮುಕ್ತಿಯನ್ನೂ ಕೇಳೆನು ಏಕೆಂದರೆ ಅದು ನಿಮ್ಮ ಪದವಿ. ನೀವೇ ನಮಗೆ ದೊರೆತಿರುವಾಗ ಅನ್ಯ ಪದವಿಗಳೆಲ್ಲ ನನಗೆ ಶೂನ್ಯ. ಅದಕ್ಕಾಗಿ ನನ್ನ ಕೊನೆಯ ಕಾಲದವರೆಗೆ ನಿಮ್ಮ ಸಂಗವೊಂದಿದ್ದಾರೆ ಸಾಕು ಎಂಬುದೇ ಈ ಮೇಲಿನ ವಚನದ ಸಾರಾಂಶ.

೨. ಅಲ್ಲಮಪ್ರಭು(೧೧೬೦)

ಬಸವಾದಿಗಳ ಹಿರಿಯ ಸಮಕಾಲೀನ. ಹನ್ನೆರಡನೆಯ ಶತಮಾನದಲ್ಲಿ ೬-೭ ದಶಕಗಳ ಕಾಲ ಜೀವಿಸಿದ್ದವ. ಹರಿಹರನಂತೆ ಬಳ್ಳಿಗಾವೆ ನಾಗವಾಸಾಧಿಪತಿ ಈತನ ಜನ್ಮದಾತ. ಚಾಮರಸಾದಿಗಳಂತೆ ಕರ ಊರ ನಿರಹಂಕಾರ ಸುಜ್ಞಾನಿಯರು ಈತನ ತಂದೆ ತಾಯಂದಿರು. ಹರಿಹರನಂತೆ ಅಲ್ಲಮ ಕಾಮಲತೆಯನ್ನು ವರಿಸಿ, ಅವಳ ಮರಣಾನಂತರ ವೈರಾಗ್ಯಶಾಲಿಯಾಗಿ ಹಲವಾರು ದೇಶಗಳನ್ನು ಸಂಚರಿಸಿ ಸಾಧನೆಯಿಂದ

ಸಿದ್ಧಿಗಳಿಸಿ ಕಲ್ಯಾಣಕ್ಕೆ ಬಂದನು. ಅಲ್ಲಿ ಶೂನ್ಯ ಸಿಂಹಾಸನಾರೋಹಣ ಮಾಡಿ ಅದರ ಅಧ್ಯಕ್ಷನಾಗಿ ವ್ಯೋಮ ಮೂರುತಿಯೆನಿಸಿದನು. ಶ್ರೀಶೈಲದಲ್ಲಿನ ಕದಳಿವನ ಈತನ ಚರಮಗಮ್ಯ ಸ್ಥಳ.

ಪ್ರಸ್ತುತ ಈ ಸಂಕಲನದಲ್ಲಿ ಅಲ್ಲಮಪ್ರಭುಗಳ ಹತ್ತು ವಚನಗಳನ್ನು ಎಸ್.ಶಿವಣ್ಣನವರು ಪ್ರಕಟಿಸಿದ್ದಾರೆ.[೨]

**ಬಸವಣ್ಣ**

"ವೀರಶೈವ ನಿರ್ಣಯ ಪರಮಾವಾತಾರ'ನೆಂದು ಪ್ರಕೀರ್ತಿನಾದ ಬಸವಣ್ಣನ ಜೀವಿತಾವಧಿ ಕ್ರಿ.ಶ.೧೨ನೆಯ ಶತಮಾನ. ತಂದೆ ತಾಯಿ ಕ್ರಮವಾಗಿ ಶೈವಾಗಮಾಚಾರ್ಯ ಮಂಡಿಗೆಯ ಮಾದಿರಾಜ ಹಾಗೂ ಮಾದಲಾಂಬಿಕೆಯರ ಮಗನಾಗಿ ಜನಿಸಿದ. ಇವರ ಗುರುಗಳು ಕಪ್ಪಡಿಯ ಸಂಗಮದೇವ ಅಥವಾ ಶೈವ ಸಂಗಮೇಶ್ವರ. ಕಲಚೂರಿ ಬಿಜ್ಜಳನಲ್ಲಿ ಮಂಗಳವಾಡದಲ್ಲಿ ಕರಣಿಕನಾಗಿ ಅನಂತರ ಕಲ್ಯಾಣದಲ್ಲಿ ದಂಡಾಧೀಶನಾದನು. ಬಾಗೇವಾಡಿ, ಕೂಡಲಸಂಗಮ, ಮಂಗಳವಾಡ, ಕಲ್ಯಾಣ, ಬಸವಣ್ಣನವರ ಕಾರ್ಯಕ್ಷೇತ್ರಗಳು. ಗಂಗಾಂಬಿಕೆ/ನೀಲಮ್ಮ ಹೆಂಡತಿಯರು. ಇವರ ಮಗ ಬಾಲಸಂಗಯ್ಯ.

ಬಸವಣ್ಣನವರ ವಚನಗಳನ್ನು ಬೆಂಗಳೂರಿನ ಬಸವ ಸಮಿತಿಯವರು ಸುಮಾರು ೧೦೮ ವಚನಗಳ ಅನುವಾದವನ್ನು ಭಾರತದ ವಿವಿಧ ಭಾಷೆಗಳಲ್ಲಿ ಪ್ರಕಟಿಸಿದ್ದಾರೆ. ಫ್ರೆಂಚ್ ಭಾಷೆಯಲ್ಲಿಯೂ ಕೂಡ ಈತನ ವಚನವನ್ನೆ ಅನುವಾದಗಳಾಗಿವೆ.

ಇಂಥಹ ಬಸವಣ್ಣನವರ ಜನಸಾಮಾನ್ಯರು ಓದದೇ ಇರುವ ಕೆಲವು ವಚನಗಳನ್ನು, ಎಸ್. ಶಿವಣ್ಣನವರು ಸಂಪಾದಿಸಿದ್ದಾರೆ. "ಕೂಡಲ ಸಂಗಮದೇವ" ಅಂಕಿತದ ೧೪೨೩ ವಚನಗಳು ಪ್ರಕಟಗೊಂಡಿವೆ. ಪ್ರಸ್ತುತ ಸಂಕಲನದಲ್ಲಿ ಅಲ್ಲಿಲ್ಲದ ೧೫ ವಚನಗಳು ಇಲ್ಲಿ ಪ್ರಕಟಿಸಿದ್ದಾರೆ.[೩]

**ಚೆನ್ನ ಬಸವಣ್ಣ**

ಬಸವಣ್ಣನ ಸಹೋದರಿ ಅಕ್ಕ ನಾಗಮ್ಮ ಹಾಗೂ ಶಿವಸ್ವಾಮಿಯವರ ಪುತ್ರ, ಷಟ್ಸ್ಥಲ ಬ್ರಹ್ಮಿ, ಚೆನಬಸವಣ್ಣ, ಬಸವಣ್ಣನ ಅನಂತರ ಬಿಜ್ಜಳನ ಅಸ್ಥಾನದಲ್ಲಿ ಬಿಕ್ಕಡಣಾಯನೆಸಿದವ. ಉಳವೆ ಈತನ ಚರಮ ತಾಣ.

ಪಾಲ್ಕೂರಿಕೆ ಸೋಮನಾಥನು ಈತನ ಸ್ತುತಿರೂಪವಾದ 'ರಗಳೆ' ರಚಿಸಿದ್ದಾನೆ. ವಿರೂಪಾಕ್ಷ ಪಂಡಿತ ಈತನ ಬಗೆಗೆ 'ಪುರಾಣ' ರಚಿಸಿದ್ದು, ಈ ಕೃತಿ ಪಾಪಯಾಮಾತ್ಯನಿಂದ ಕಾಲಾನಂತರದಲ್ಲಿ ತೆಲುಗಿಗೆ ಅನುವಾದ ಹೊಂದಿದೆ.

‘ಕೂಡಲ ಚೆನ್ನಸಂಗಮದೇವಾ’ ಅಂಕಿತದ ೧೭೮೪ ವಚನಗಳು ಪ್ರಕಟಗೊಂಡಿವೆ. ಅಲ್ಲಿರದ ೩೪ ವಚನಗಳು ಪ್ರಸ್ತುತ ಸಂಕಲನದಲ್ಲಿವೆ. ಈತನ ಇತರ ಕೃತಿಗಳು ಕರಣಹಸಿಗೆ ಮಿಶ್ರಾರ್ಪಣ ಸ್ವರವಚನಗಳು. ಪದಮಂತ್ರ ಗೋಪ್ಯ ಹಿರಿಯ ಮಂತ್ರಗೋಪ್ಯ.[೪]

## ಸಿದ್ದರಾಮ

‘ಸಮತೆಯ ಗಾರುಡಿಗ’ನೆನಿಸಿದ ಸಿದ್ದರಾಮ ಬಸವಾದಿಗಳ ಕಿರಿಯ ಸಮಕಾಲೀನ. ರೇವಣ ಸಿದ್ದೇಶ್ವರರ ಕೃಪಾಕಟಾಕ್ಷ ಪಾತ್ರ. ತಂದೆ ತಾಯಿಗಳು ಸೊನ್ನಲಿಗೆ ಮುದ್ದಯ್ಯ, ಸುಗ್ಗವ್ವೆ, ಅಣ್ಣ ಬೊಮ್ಮಣ್ಣ, ಶ್ರೀ ಶೈಲದ ಮಲ್ಲಿಕಾರ್ಜುನನ ಕೃಪಾಪಾತ್ರ. ಸೊನ್ನಲಿಗೆಯಲ್ಲಿ ಕೆರೆ, ಭಾವಿ, ದೇವಾಲಯಗಳನ್ನು ನಿರ್ಮಿಸಿದನು. ಅಲ್ಲಮನ ಸಲಹೆಯಂತೆ ಕಲ್ಯಾಣಕ್ಕೆ ಬಂದು ಚೆನ್ನಬಸವಣ್ಣನಿಂದ ದೀಕ್ಷೋಪದೇಶ ಪಡೆದನು.

ರಾಘವಾಂಕನು ಈತನ ಪುರಾಣವನ್ನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ. ಹರಿಹರ ಈತನ ಬಗೆಗೆ ರಗಳೆ ಕೃತಿಯೊಂದನ್ನು ರಚಿಸಿರುವ ಸಂಭಾವ್ಯತೆಯ ಬಗೆಗೆ ಪ್ರೊ.ದೊ.ಲ. ನರಸಿಂಹಚಾರ್ಯರು ಚರ್ಚಿಸಿದ್ದಾರೆ. ‘ಕಪಿಲಸಿದ್ದ ಮಲ್ಲಿಕಾರ್ಜುನ’ ಅಂಕಿತದ ೧೬೭೧ ವಚನಗಳು ಪ್ರಕಟವಾಗಿವೆ.[೫]

## ಅಮುಗೆ ರಾಯಮ್ಮ

ಈಕೆ ಕೂಡ ೧೨ನೆಯ ಶತಮಾನದವಳು. ಈಕೆಗೆ ‘ವರದಾನಿಯಮ್ಮ’ ಎಂಬ ಮತ್ತೊಂದು ಹೆಸರಿದೆ. ಪುಳಜದ ಸೋಮನಾಥದೇವರ ಭಕ್ತೆ. ಅಮುಗಿದೇವಯ್ಯನ ಪತ್ನಿ. ಅಮುಗೆ ರಾಯಮ್ಮ.

ಶಿವಲಿಂಗ ಹಾಗೂ ಅಜ್ಞಾತಕಾರ ರಚಿಸಿರುವ “ಅಮುಗಿದೇವ ಸಾಂಗತ್ಯ” ಮತ್ತು “ನೇಗಿಯ ಅಮುಗಯ್ಯ” ಜಾನಪದ ಕೃತಿಗಳಲ್ಲಿ ಈಕೆಯ ಪ್ರಸ್ತಾಪವಿದೆ. “ಅಮುಗೇಶ್ವರ ಲಿಂಗ” ಅಂಕಿತದ ೧೧೫ ವಚನಗಳು ಪ್ರಕಟವಾಗಿದೆ. ಪ್ರಸ್ತುತ ಸಂಕಲನದಲ್ಲಿ ಈಕೆಯ ವಚನವೊಂದಿದೆ. ಆಚಾರನಿಷ್ಠತೆ ಈಕೆಯ ನಡೆ-ನುಡಿಗಳ ಪ್ರಮುಖ ಲಕ್ಷಣ.[೬]

## ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ

ಈಕೆಯ ಹೆಸರು ತಿಳಿದುಬಂದಿಲ್ಲ. ಕಾಲ ೧೨ನೆಯ ಶತಮಾನ. ಇವರ ಅಂಕಿತ “ಮಸಣಯ್ಯ ಪ್ರಿಯ ಗಜೇಶ್ವರ” ಪ್ರಸ್ತುತ ಹೊಸ ವಚನಗಳು ಎಂಬುದರಲ್ಲಿ ಶಿವಣ್ಣನವರು ಒಂದು ವಚನವನ್ನು ಸಂಕಲಿಸಿದ್ದಾರೆ. ಇದರಲ್ಲಿ ವಚನ-ಚನ್ನಬಸವ ಪ್ರಭುದೇವ ಮರುಳ ಶಂಕರರ ಪ್ರಸಾದಸಿದ್ಧಿ ತನಗಾಗಲೆಂದು ಹಾರೈಸಿದ್ದಾಳೆ.[೭]

### ನೀಲಮ್ಮ

ಬಸವಣ್ಣನವರ ಪತ್ನಿಯೇ ನೀಲಮ್ಮ. ಕಾಲ ೧೨ನೇ ಶತಮಾನ. ಸಂಗಯ್ಯ ಅಂಕಿತದ ೧೨೬ ವಚನ ಪ್ರಕಟಿತ. ಪ್ರಸ್ತುತ ಸಂಕಲನದಲ್ಲಿ ಈಕೆಯ ೧೬೧ ಅಪ್ರಕಟಿತ ವಚನಗಳಿವೆ. ಕವಿ ಚರಿತೆಕಾರರು ಪ್ರಸಾದ 'ಸಂಪಾದನೆ' ಎಂಬ ಕೃತಿ ಈಕೆಯದೆಂದು ಹೆಸರಿಸಿದ್ದಾರೆ. ಕೃತಿ ಅಲಭ್ಯ.[೮]

### ಅಕ್ಕಮಹಾದೇವಿ

ಶ್ರೀಶೈಲದ ಚೆನ್ನಮಲ್ಲಿಕಾರ್ಜುನನ ಪರಮ ಭಕ್ತೆ. ಕಾಲ ೧೨ನೆಯ ಶತಮಾನ. ಇವರ ವಚನಗಳ ಅಂಕಿತ 'ಚೆನ್ನಮಲ್ಲಿಕಾರ್ಜುನ'' ಸುಮಾರು ೩೫೫ ವಚನಗಳು ಪ್ರಕಟವಾಗಿವೆ. ಪ್ರಸ್ತುತು ಸಂಕಲನದಲ್ಲಿ ಆಕೆಯ ೭೮ ವಚನಗಳಿವೆ. ಈಕೆಯ ಬಗೆಗೆ ಹರಿಹರ, ಚೆನ್ನಬಸವಾಂಕ ರಾಚಕವಿಗಳು ರಗಳೆ, ಷಟ್ಪದಿ, ಸಾಂಗತ್ಯಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಈಕೆಯ ಯೋಗಾಂಗ ತ್ರಿವಿಧಿ, ಸ್ವರವಚನ, ಸೃಷ್ಟಿಯ ವಚನಗಳು ಪ್ರಕಟವಾಗಿದೆ. "ಅಕ್ಕಗಳ ಪೀಠಿಕೆ" ಒಂದು ಕೃತಿ ಅಲಭ್ಯ.[೯]

### ಮೋಳಿಗೆ ಮಹಾದೇವಿ

ಈಕೆ ಕಾಶ್ಮೀರದ ರಾಜ ಮಹದೇವರಾಯನ ಪತ್ನಿ. ಕಾಲಕಮ್ರದಲ್ಲಿ ರಾಜ್ಯ ತ್ಯಜಿಸಿ ಕಲ್ಯಾಣಕ್ಕೆ ಬಂದು ಮೋಳಿಗೆ ಕಾಯಕದಲ್ಲಿ ತೊಡಗಿದರು. ಕಾಲ ಹನ್ನೆರಡನೆಯ ಶತಮಾನ. "ಎನ್ನಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ'' ಅಂಕಿತಲ್ಲಿನ ಈಕೆಯ ೬೯ ವಚನಗಳು ಪ್ರಕಟವಾಗಿದೆ. ಪ್ರಸ್ತುತ ಸಂಕಲನದಲ್ಲಿ ಈಕೆಯ ವಚನವೊಂದೆ.[೧೦]

### ಸೊಡ್ಡಳ ಬಾಚರಸ

ಕಾಲ ಹನ್ನೆರಡನೆಯ ಶತಮಾನ, ಬಸವಣ್ಣನವರ ಆಪ್ತ ವರ್ಗಕ್ಕೆ ಸೇರಿದವನು. ಈತನ ನೋಟದಿಂದ ಇಟ್ಟಿಯ ಹಣ್ಣುಗಳು ಸಿಹಿಯಾದುದನ್ನು ಚನ್ನಬಸವಣ್ಣ ತನ್ನ ವಚನದಲ್ಲಿ ಉಲ್ಲೇಖಿಸಿದ್ದಾನೆ. ಈತನ ೧೦೪ ವಚನ ಪ್ರಕಟವಾಗಿದ್ದು, ಇಲ್ಲಿ ಈತನ ಏಳು ಅಪ್ರಕಟಿತ ವಚನಗಳಿವೆ.

ಪ್ರಸ್ತುತ ವಚನ ಸಂಕಲನದ ಕಾರ್ಯವನ್ನು ಕರ್ನಾಟಕ ಸಾಹಿತ್ಯ ಅಕಾಡಮಿಯವರ ಸಹಾಯದಿಂದ ಶಿವಣ್ಣನವರಿಂದ ಮಾಡಿದರು.

### ಅಲ್ಲಮಪ್ರಭು ವಚನಗಳು

ಉದಯವಾದ ಬಳಿಕವೊಡಲಿಂಗೆ ಕುದಿವರ್ಯೆಯ್ಯ
ಅಸ್ತಮಾನದ ಬಳಿಕ ತಮಂಧ ಕವಿವುದಯ್ಯ

ನಿಕ್ರಿಯೆಂಬ ಭ್ರಾಂತಿನಲ್ಲಿ
ಒಡಲೊಂದು ಕಡೆ ತಾವೊಂದು ಕಡೆ
ಜೀವವೊಂದು ಕಡೆಯಾಯಿತ್ತು ನೋಡ
ಮುಗಿಲೊಳಗಣ ಮಿಂಚು
ಪವನನೊಳಗಣ ಸಂಚನನಾರು ಬಲ್ಲರು ಹೇಳ ಗುಹೇಶ್ವರ[೧೨]

ಬೆಳಗಾದರೆ ಸಾಕು ಹೊಟ್ಟೆ ಬದುಕಿಸಲು ಚಿಂತಿಸಿ ನೂರಾರು ಕಾಯಕ ಮಾಡುವವರು. ರಾತ್ರಿಯಾದರೆ ಸಾಕು ಮಲಗಲು ಹವಣಿಸುವರು. ಆ ನಿದ್ರೆಯೆಂಬ ಭ್ರಾಂತಿಯಲ್ಲಿ ತಾನಿದ್ದರೂ, ಶವದಂತೆ ಇರುವನು. ಅದರಲ್ಲಿ ದೇಹ ಒಂದು ಕಡೆ ಜೀವ ಒಂದು ಕಡೆ ಆ ಜೀವದ ಠಾವನ್ನು ನಾವು ಕಾಣೆವು ಹೇಗೆಂದರೆ ಮುಗಿಲಲ್ಲಿ ಮಿಂಚು ಬರುತ್ತದೆ ಎಂದು ಗೊತ್ತು. ಆದರೆ ಯಾವಾಗ ಬರುತ್ತದೆ ಎಂದು ತಿಳಿಯದು. ಹಾಗೆ ಗಾಳಿಯಲ್ಲಿರುವ ನಮ್ಮ ಜೀವ ಯಾವಾಗ ಹೋಗುತ್ತದೆ ಎಂದು ನಮಗೇ ತಿಳಿಯದು. ಈಗಿದ್ದರೂ ಕೂಡ ಹುಚ್ಚು ವ್ಯಾಮೋಹಕ್ಕೆ ಒಳಗಾಗಿ ಇಲ್ಲಸಲ್ಲದ ಕಷ್ಟವನ್ನು ಅನುಭವಿಸುವುದರ ಬದಲು ದೇವರ ಮೊರೆ ಹೋಗು ಎಂದು ಹೇಳುತ್ತಾರೆ.

## ಸಾರಾಂಶ

ಸಾಗರದಲ್ಲಿ ಧುಮುಕಿದ ಮೇಲೆ ಅಲೆಗೆ ಎದುರಾಗಿ ಈಜದೆ ಅಲೆಗಳ ಜೊತೆಸಾಗಿದ್ದರೆ ನಾವು ನಮ್ಮ ಗುರಿ ತಲುಪಬಹುದು. ಸಂಸಾರವೆಂಬ ಸಾಗರದಲ್ಲಿ ಬಿದ್ದ ಮೇಲೆ ಸುಖದುಃಖ ಎಂಬ ಅಲೆಗಳು ಬರುವುದು ಸಾಮಾನ್ಯ. ಆಗಾಗಿ ಅವುಗಳಿಗೆ ಅಂಜದೆ ಗಟ್ಟಿಯಾಗಿ ನೆಲೆ ನಿಂತು ಸಂಸಾರ ಮಾಡಬೇಕು ಎಂದು ವಚನದಲ್ಲಿ ತಿಳಿಸಿದ್ದಾರೆ.

ಸಾಗರದೊಳಗೆ ಹುಳ್ಳಿ ಬರುತ್ತಿರಲು
ತೆರೆ ತೆರೆಗಳು ಸಾಗಿದವಲ್ಲ
ಸಂಸಾರ ಸಾಗರದೊಳಗೆಯಿಪ್ಪ ಕಾರಣ
ಸುಖದುಃಖಾದಿಗಳು ತಾಗಿದವಲ್ಲ
ಇದಕ್ಕೆ ಇದು ಮೂರ್ತಿಯಾದ ಕಾರಣ ಗುಹೇಶ್ವರ[೧೩]

## ಬಸವಣ್ಣನ ವಚನಗಳು

ಜ್ಞಾನಕ್ಕೆ ವಿಶ್ವವೇ ತಲೆಬಾಗುತ್ತದೆ ಎನ್ನುವಂತೆ. ಆದರೆ ಶಿವಜ್ಞಾನಿಯಾಗಬೇಕು, ದೊಡ್ಡದಾದ ಆನೆ ಸಣ್ಣ ಅಂಕುಶಕ್ಕೆ ಎದುರುತ್ತದೆ. ವಜ್ರಕ್ಕೆ ಗಿರಿ ಅಂಜುತ್ತದೆ. ಅದೆಂತಹ ಕಠಿಣ ಕಲ್ಲು ಗಾಜಾದರೂ ವಜ್ರ ಅದನ್ನು ಕತ್ತರಿಸುತ್ತದೆ. ಅದೆಂತಹ ಕತ್ತಲಿದ್ದರೂ ಒಂದು ಸಣ್ಣ ಜ್ಯೋತಿ ಅದನ್ನು ಹೊಡೆದೋಡಿಸಿ

ಬೆಳಕನ್ನು ನೀಡುತ್ತದೆ. ಸಣ್ಣ ಕಿಡಿ ದೊಡ್ಡ ಅರಣ್ಯವನ್ನು ಸುಟ್ಟು ಹಾಕುತ್ತದೆ. ತಿಳಿದ ಶಿವಜ್ಞಾನಿಗೆ ಇಡೀ ವಿಶ್ವವೇ ಅಂಜುತ್ತದೆ.

ಕೆಳಗಿನ ಈ ವಚನದಲ್ಲಿ ಅಜ್ಞಾನಿಯಾಗುವುದು ಸುಲಭ ಜ್ಞಾನಿಯಾಗುವುದಕ್ಕೆ ಬಹಳ ವರ್ಷಗಳೇ ಬೇಕು. ಜ್ಞಾನ ಎಂದೆಂದಿಗೂ ಶಾಶ್ವತ ಅದಕ್ಕಾಗಿ ಕ್ಷಣಿಕ ಸುಖವನ್ನು ಬಯಸದೆ ಶಾಶ್ವತ ಸುಖವನ್ನು ಪಡೆಯುವ ಧ್ಯಾನ, ತಪಸ್ಸು ಮಾಡಿ ಶಿವಜ್ಞಾನಿಯಾಗಬೇಕು ಎಂಬುದನ್ನು ಅಂಕುಶ, ವಜ್ರ, ಜ್ಯೋತಿ, ಕಿಡಿ ಇವುಗಳ ಮಹತ್ವವನ್ನು ಇಲ್ಲಿ ತಿಳಿಸಿದ್ದಾರೆ.

ಅಂಕುಶಕ್ಕೆ ಕರಿಯಂಜದೆ?
ವಜ್ರಕ್ಕೆ ಗಿರಿಯಂಜದೆ?
ಜ್ಯೋತಿಗೆ ತಮಂಧವಂಜದೆ
ಕಿರುಕಿಡಿ ಕಾಂತರವ ಸುಡದೆ?
ಶಿವಜ್ಞಾನಿಗೀ ಸಚರಾಚರವೆಲ್ಲಿ ಅಂಜದೆ?
ಕೂಡಲ ಸಂಗಮದೇವಾ?[೮೪]

ಸಾರಾಂಶ

ನನ್ನೊಳಗೆ ನೀವಿದ್ದರೂ ಕೂಡ ನಿಮ್ಮನ್ನು ಗುರುತಿಸದಂಥಹ ಅಜ್ಞಾನಿ ನಾನಾದೆ. ನನ್ನನ್ನು ನಾ ತಿಳಿದ ಮೇಲೆ ನೀವು ನನ್ನಲ್ಲಿರುವಿರಿ ಎಂಬ ಜ್ಞಾನೋದಯ ನನಗಾಯಿತು. ನಿಮ್ಮ ನಿಜರೂಪವನ್ನು ನಾನು ನೋಡಲಿಕ್ಕೆ ನಿಮ್ಮ ಮೂರ್ತಿ ಬೇಕಾಯಿತು. ನಿಮ್ಮನ್ನು ನಾ ಸಂಪೂರ್ಣ ತಿಳಿದ ಮೇಲೆ ಲಿಂಗ ಜಂಗಮದಲ್ಲಿಯೂ ನಿಮ್ಮ ಇರುವಿಕೆಯನ್ನು ಅರಿತೆನು. ನಮ್ಮಲ್ಲಿ ಅಡಗಿರುವ ನಿಮ್ಮನ್ನು ಕಾಣಲು ಭಕ್ತಿ ಎಂಬುದನ್ನು ಅರ್ಪಿಸಿದರೆ ಸಾಕು ಕೂಡಲ ಸಂಗಮದೇವ ಎಂಬುದೇ ಈ ಕೆಳಗಿನ ವಚನದ ಸಾರ.

ಎನ್ನ ನಾನರೆಯದ ಮುನ್ನ
ನೀನೆಲ್ಲಿದ್ದೆಯಯ್ಯ?
ಎನ್ನೊಳಗಿರ್ದು
ನಿನ್ನ ತೋರಲಿಕೆ ನೀನು ರೂಪಾದೆ
ಇನ್ನು ಜಂಗಮಲಿಂಗವೆಂದು ನಂಬಿದೆ ಕಾಣ
ಕೂಡಲ ಸಂಗಮದೇವಾ[೮೫]

ಕರ್ಮಜಾತಕವ ಕಳೆದು
ಶ್ರೀಗುರು ಪುಣ್ಯವಂತನ ಮಾಡಿದ ಬಳಿಕ

ಶಿವಕುಲವಲ್ಲದೆ ಅನ್ಯಥಾ ಕುಲವುಂಟೆ ಶರಣರಿಗೆ?
ಆವ ಕುಲವಾದಡೇನು?
ಶಿವಲಿಂಗ ವಿದ್ಧಾತನೆ ಕುಲಜನು
ಕುಲವನರಸುವೆ ಶರಣರಲ್ಲಿ
ಆಚಾರವನರರಸಬೇಕಲ್ಲ(ವೆ)
ಜಾತಿ ಸಂಕರನಾದ ಬಳಿಕ?
ಆದೆಂತೆಂದಡೆ
ಶಿವಧರ್ಮ ಪುರಾಣದಲ್ಲಿ
ಶಿವೇ ಜಾತೀ ಕುಲೇ ಸುಮಃ ಪೂರ್ವಜನ್ಮವಿವರ್ಜಿತ
ಉಮಾ ಮಾತಾ ಪಿತಾ ರುದ್ರ ಈಶ್ವರಂ ಕುಲಮೇವ ಚ
ಎಂಬುದಾಗಿ
ನಿಮ್ಮ ಕುಲಕ್ಕೆ ಪ್ರತಿಗಾಣೆನು
ನಿಮ್ಮ ಕುಲದವರೆಲ್ಲರೂ ನಿಮ್ಮ ಪುತ್ರರು
ನಿಮ್ಮ ಕುಲಕ್ಕೆ ಪ್ರತಿಯಿಲ್ಲಾದಾಗಿ
ಕೂಡಲ ಸಂಗಮದೇವಾ
ನಿಮ್ಮ ಶರಣರಲ್ಲಿ
ಕುಲವನರಸುವವರಿಗೆ
ನಾಯಕ ನರಕ ತಪ್ಪದು.[೧೬]

ಹುಟ್ಟಿದಾಗಿನ ಕರ್ಮಗಳನ್ನು ಕಳೆದು ದೇವರು ನಮ್ಮನ್ನು ಪುಣ್ಯವಂತರನ್ನಾಗಿ ಮಾಡಿದ ಬಳಿಕ ನಾವೆಲ್ಲರೂ ಶಿವಕುಲಕ್ಕೆ ಸೇರಿದವರು. ಆ ಕುಲವಲ್ಲದೆ ನಮಗೆ ಬೇರೆ ಕುಲ ಇಲ್ಲ. ಹುಟ್ಟುತ್ತಾ ಯಾವ ಜಾತಿಯವನಾದರೂ ಶಿವಾಚಾರ ಶಿವಲಿಂಗ ಧರಿಸಿದ ಬಳಿಕ ಅವನು ಉತ್ತಮ ಕುಲದವನು ಎಂದರ್ಥ. ಶರಣರ ಸಮೂಹದಲ್ಲಿ ಕುಲವನರಸದೆ. ಅವರಲ್ಲಿ ಆಚಾರವನ್ನು ಅರಸಬೇಕು. ಅಂತರ್ಜಾತಿ ಸಂಬಂಧದಿಂದ ಹುಟ್ಟಿದ ಬಳಿಕ ಅವನಿಗೆ ಶಿವ ಕುಲವಲ್ಲದೆ ಬೇರೆ ಕುಲವಿಲ್ಲ. ಅದಕ್ಕಾಗಿಯೇ ಶಿವಪುರಾಣದಲ್ಲಿ ಇಂತವರಿಗೆ ಪಾರ್ವತಿಯೇ ತಾಯಿ, ಈಶ್ವರನೇ ತಂದೆ ಎಂದು ನಂಬಬೇಕು. ನಿಮ್ಮ ಕುಲದವರೆಲ್ಲರೂ ನಿಮ್ಮ ಮಕ್ಕಳು ಇದಕ್ಕೆ ಬೇರೆ ಜಾತಿ ಎಂದು ಕರೆಯುವ ಅವಶ್ಯಕತೆಯಿಲ್ಲ. ನಿಮ್ಮ ಕುಲದಲ್ಲಿಯೇ ಹುಟ್ಟಿ ನಿಮ್ಮ ಕುಲದಲ್ಲಿಯೇ ಬೆಳೆದು, ಬೇರೆ ಕುಲ ಎಂದು ಹುಡುಕಾಡುವವರಿಗೆ ನರಕ ತಪ್ಪದು ಎಂದು ಈ ಮೇಲಿನ ವಚನದಲ್ಲಿ ತಿಳಿಸಿದ್ದಾನೆ.

## ಸಾರಾಂಶ

ಒಬ್ಬ ವ್ಯಕ್ತಿಯನ್ನು ಜ್ಞಾನಿ, ಪಂಡಿತನೆಂದು ಕರೆಯಬೇಕಾದರೆ ಅವನು ವೇದ, ಪುರಾಣ, ಶಾಸ್ತ್ರವನ್ನು ಓದಬೇಕೆಂದೇನೂ ಇಲ್ಲ. ಒಳ್ಳೆಯ ಹೃದಯವಂತಿಕೆಯ ಗುಣಗಳನ್ನು ಬೆಳಸಿಕೊಂಡರೆ ಸಾಕು ಅವನೇ ಉತ್ತಮನು. ಎಲ್ಲವನ್ನೂ ತಿಳಿದವನಾಗಿ ಬೇರೆಯವರ ಕಷ್ಟ, ನೋವುಗಳಿಗೆ ಸ್ಪಂಧಿಸಿದವನು. ಜ್ಞಾನಿಯಾದರೂ ವ್ಯರ್ಥ, ಪಂಡಿತನಾದರೂ ವ್ಯರ್ಥ. ಅದಕ್ಕಾಗಿಯೇ ಒಳ್ಳೆಯ ಭಕ್ತರಲ್ಲಿ ನಾನೂ ಒಬ್ಬನಾಗಿ, ಅವರ ಹೃದಯವನ್ನು ಗೆದ್ದವನೇ ಉತ್ತಮನು ಎಂದು ಬಸವಣ್ಣನವರು ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾರೆ.

ವೇದ ಸಾಕು ಸಾಕು
ಶಾಸ್ತ್ರವಂತಿರಲಿ
ಆಗಮ ಸಾಕು ಸಾಕು
ಪುರಾಣವಂತಿರಲಿ
ಸಾಧಿಸಿದೆನು ಸದ್ಭಕ್ತರ ಹೃದಯ
ಲಿಂಗ ಜಂಗಮದ ಪ್ರಸಾದವ
ಸಜ್ಜನ ಸದರ್ಥರ
ಕೂಡಲಸಂಗಮದೇವಯ್ಯ[೧೭]

ಶ್ರೀ ವಿಭೂತಿ ರುದ್ರಾಕ್ಷಿಯೆ
ಭಕ್ತಿ ಮುಕ್ತಿಗೆ ಸಾಧನವು ಎನ್ನ ತಂದೆ
ಶಿವ ಶಿವಾಯೆಂಬ ಮಂತ್ರವೆನ(ಗೆ)
ಅಮೃತರೋಗಣೆಯು ಎನ್ನ ತಂದೆ
ಕೂಡಲ ಸಂಗಮದೇವಯ್ಯ
ನಿಮ್ಮ ನಾಮದ ರುಚಿ
ತುಂಬಿತೋ ಎನ್ನ ತನುವ[೧೮]

ಶ್ರೀಗುರುವಿನ ವಿಭೂತಿ, ರುದ್ರಾಕ್ಷಿಯೆ ನಮ್ಮ ಭಕ್ತಿ ಮುಕ್ತಿಗೆ ಸಾಧನವು ಇವುಗಳನ್ನು ಅನವರತ ನಿರ್ಮಲ ಚಿತ್ತದಿಂದ ಧರಿಸುವುದರ ಮೂಲಕ ನಾವು ಮುಕ್ತಿಯನ್ನು ಪಡೆಯಬಹುದು. ಪ್ರತಿದಿನ ಪ್ರತಿಕ್ಷಣ ಶಿವ ಶಿವಾ ಎಂಬ ನಿಮ್ಮ ನಾಮವನ್ನು ಅನವರತ ಸ್ಮರಿಸುವ ಮಂತ್ರವೇ ನನಗೆ ಅಮೃತ ಕುಡಿದಷ್ಟು ಸಂತೋಷವನ್ನು ನೀಡುತ್ತದೆ. ನನ್ನ ಕಾಯ ವಾಚ, ವಸ್ತುಗಳ ಬಗ್ಗೆ ಬೇರೆ ವ್ಯಾಮೋಹವಿಲ್ಲ. ನಿಮ್ಮ ನಾಮದ ರುಚಿಯೇ ನನ್ನ ತನುವ ತುಂಬಿದೆ ಎಂದು ಬಸವಣ್ಣನವರು ಈ ಮೇಲಿನ ವಚನದಲ್ಲಿ ತಿಳಿಸಿದ್ದಾರೆ.

ಚೆನ್ನಬಸವಣ್ಣನವರ ವಚನಗಳು

"ಸಗಣಿಯ ಜೊತೆ ಸರಸವಾಡುವುದಕ್ಕಿಂತ, ಗಂಧದೊಡನೆ ಗುದ್ದಾಡು" ಎಂಬ ನಾಣ್ನುಡಿಯಂತೆ, ಸಗಣಿಯ ಜೊತೆ ಸರಸವಾಡಿದರೆ ನಮ್ಮ ದೇಹವೆಲ್ಲ ಸಗಣಿಯಾಗುತ್ತದೆ. ಗಂಧದೊಡನೆ ಜಗಳವಾಡಿದರೆ ನಮ್ಮ ದೇಹವೂ ಕೂಡ ಸುವಾಸನೆಯಿಂದ ಕೂಡಿರುತ್ತದೆ.

ಬೆಂಕಿಯ ಜೊತೆ ಉರುವಲು ಆಟವಾಡಿದರೆ ಅದು ಸುಟ್ಟುಭಸ್ಮವಾಗುತ್ತದೆ. ಸಮುದ್ರದ ರಭಸಕ್ಕೆ ಎಂತಹ ಬೆಟ್ಟ ಪರ್ವತಗಳಾದರೂ ಕೊರೆದು ನಾಶಾವಾಗಿ ಬಿಡುತ್ತವೆ. ದೀಪದ ಜೊತೆ ಕತ್ತಲು ಆಟವಾಡಿದರೆ ಕತ್ತಲು ನಾಶವಾಗಿ ಬೆಳಕು ತುಂಬುತ್ತದೆ. ಹಾಗೆಯೇ ನಾವು ಶರಣರ ಜೊತೆ ಸ್ನೇಹ ಮಾಡಿದರೆ ನಮ್ಮ ಸಂಸಾರವೆಂಬ ವ್ಯಾಮೋಹ ಸುಟ್ಟು ಅನಂತ ಮುಕ್ತಿ ಸಿಗುತ್ತದೆ.

ಅದಕ್ಕಾಗಿಯೇ ನಾವು ಸಂಗಮಾಡುವುದಾದರೆ ಒಳ್ಳೆಯವರ ಸಂಗವನ್ನು ಮಾಡಬೇಕು. ಆಗ ನಾವು ಒಳ್ಳೆಯ ಗುಣಗಳನ್ನು ಕಲಿಯುತ್ತೇವೆ ಎಂಬುದನ್ನು ಈ ಕೆಳಗಿನ ವಚನದಲ್ಲಿ ಚೆನ್ನಬಸವಣ್ಣನವರು ಬೆಂಕಿ-ಕಟ್ಟಿಗೆ, ಸಮುದ್ರ-ಬೆಟ್ಟ, ದೀಪ-ಕತ್ತಲು ಎಂಬ ರೂಪಕಗಳನ್ನು ನೀಡುವುದರ ಮೂಲಕ ನಮ್ಮೆಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ತಿಳಿಸಿದ್ದಾರೆ.

ಅಗ್ನಿಯ ಕೂಡಾಡಿ ಕಾಷ್ಠಗಳೆಲ್ಲೂ ಕೆಟ್ಟ ಕೇಡ ನೋಡಯ್ಯ
ಜಲಧಿಯ ಕೂಡಾಡಿ ಘಟ್ಟ ಬೆಟ್ಟಗಳಲ್ಲ ಕೆಟ್ಟ ಕೇಡ ನೋಡಯ್ಯ
ಜ್ಯೋತಿಯ ಕೂಡಾಡಿ ಕತ್ತಲೆ ಕೆಟ್ಟ ಕೇಡ ನೋಡಯ್ಯ
ನಿಮ್ಮ ಶರಣರ ಕೂಡಾಡಿ ನನ್ನ ಭವ ಭವಂಗಳು ಕೆಟ್ಟ ಕೇಡ ನೋಡಯ್ಯ
ಕೂಡಲ ಚೆನ್ನಸಂಗಮದೇವ್

ಈ ಮೇಲಿನ ವಚನವು ಕೇಳಲು ಇಂಪಾಗಿ ಕನ್ನಡ ಛಂದಸ್ಸಿನ ಪ್ರಕಾರಗಳಲ್ಲಿವೊಂದಾದ ಅಂತ್ಯಪ್ರಾಸವನ್ನು ಸಹ ಹೊಂದಿದೆ.

ಅನಂತಕಾಲ
ಹಂಸೆಯ ಸನ್ನಿಧಿಯಲ್ಲಿ ಬಕನಿದ್ದರೆ ಶುಚಿಯಾಗಬಲ್ಲದೆ?
ನದಿವಾಸದೊಳಗೆ ಪಾಷಣವಿದ್ದರೆ ಮೃದುವಾಗಬಲ್ಲದೆ?
ಕಲ್ಪವೃಕ್ಷದ ಸನ್ನಿಧಿಯಲ್ಲಿ ಕೊರಡಿದ್ದರೆ ಕೊನರಬಲ್ಲುದೆ?
ಕಾಶಿಯ ಕ್ಷೇತ್ರದಲ್ಲಿ ಸ್ವಾನವಿದ್ದರೆ
ಅದರ ಹಾಲು ಪಂಚಾಮೃತವಾಗಬಲ್ಲುದೆ?
ಶಿವಜಾತ್ರೆಯಲ್ಲಿ ಗಾರ್ದಪನಿದ್ದರೆ
ಕಾರಣಿಕ ಪುರುಷನಾಗಬಲ್ಲುದೆ?

ಖಂಡುಗಕ್ಷೀರದೊಳಗೆ ಇದ್ದಲಿದ್ದರೆ
ಶುಭ್ರ ಬಿಳಿದಾಗಬಲ್ಲುದೆ?
ಶಿವಜ್ಞಾನಿಗಳ ಸನ್ನಿಧಿಯಲ್ಲಿ
ಲೋಕದಜ್ಞಾನಿಗಳಿದ್ದರೆ, ಸುಜ್ಞಾನಿಗಳಾಗಬಲ್ಲರೆ?
ಕೂಡಲ ಚೆನ್ನ ಸಂಗಮದೇವ[೨೦]

'ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ ಜೇನ ಮಳೆಗರೆದರೆ ವಿಷ ಹೋಗುವುದೇ'' ಎಂಬ ಪುರಂದರ ದಾಸರ ಕೀರ್ತನೆಯ ಸಾಲಿನಂತೆ ನಾವು ಇರುವ ಸ್ಥಳ ಮುಖ್ಯವಲ್ಲ. ನಮ್ಮ ಅಂತರಂಗ ಮುಖ್ಯ. ಅದು ಶುದ್ಧವಾಗಿದರೆ ನಾವು ಶುದ್ಧವಾದ ಜ್ಞಾನಿಗಳಾಗುತ್ತೇವೆ ಎಂಬುದರಲ್ಲಿ ಸಂಶಯವೇ ಇಲ್ಲವೆಂದು ಈ ಮೇಲಿನ ಬಸವಣ್ಣನ ವಚನದ ಸಾರಾಂಶದಿಂದ ತಿಳಿಯಬಹುದು.

ಹಂಸಪಕ್ಷಿ ಬಿಳಿಯ ಬಣ್ಣದ ನೀರಹಕ್ಕಿ ಅದರಂತೆ ಬಕವೂ ಕೂಡ ನೀರಲ್ಲಿ ವಾಸಿಸಿದ ಮಾತ್ರಕ್ಕೆ ಅದು ಹಂಸಪಕ್ಷಿಯಾಗಲಾರದು. ಬಹಳಕಾಲ ಕಲ್ಲು ನೀರೊಳಗಿದ್ದರೂ ಸಹ ಅದು ನೆನೆದು ಮೃದುವಾಗಲಾರದು. ಕಲ್ಪವೃಕ್ಷದ ಪಕ್ಕ ಒಣಗಿದಮರದ ಕೊರಡಿದ್ದರೂ ಅದು ಅದರ ಮಹತ್ವದಿಂದ ಚಿಗುರಲಾರದು. ಪುಣ್ಯಕ್ಷೇತ್ರವಾದ ಕಾಶಿಯಲ್ಲಿ ನಾಯಿ ವಾಸಿಸಿದ ಮಾತ್ರಕ್ಕೆ ಅದರ ಹಾಲು ಪಂಚಾಮೃತ ವಾಗಲಾರದು. ಶಿವ ಜಾತ್ರೆಯಲ್ಲಿ ಕತ್ತೆ ಇದ್ದರೆ ಅದು ಶುಭ ನುಡಿವ ಕಾರಣಿಕನಾಗಬಲ್ಲುದೆ. ಕೊಪ್ಪರಿಗೆ ಹಾಲಿನಲ್ಲಿ ಇದ್ದಲಿಯನ್ನಿಟ್ಟರೆ ಅದು ತನ್ನ ಕಪ್ಪುಬಣ್ಣ ಬಿಟ್ಟು ಬಿಳಿದಾಗಲಾರದು. ಶಿವಜ್ಞಾನಿಗಳ ಜೊತೆ ಲೋಕದ ಜ್ಞಾನಿಗಳಿದ್ದ ಮಾತ್ರಕ್ಕೆ ಅವರು ಸುಜ್ಞಾನಿಗಳಾಗಲು ಸಾಧ್ಯವಿಲ್ಲ. ಅವರ ಆಚಾರವಿಚಾರ ಅಂತಃ ರಂಗ ಶುದ್ಧವಿದ್ದರೆ ಮಾತ್ರ ಜ್ಞಾನಿಗಳಾಗಲು ಸಾಧ್ಯ ಎಂದು ಮೇಲಿನ ಉದಾಗಳ ಮೂಲಕ ಚೆನ್ನಬಸವಣ್ಣ ನವರು ಈ ವಚನದಲ್ಲಿ ತಿಳಿಸಿದ್ದಾರೆ.

**ಸಾರಾಂಶ**

"ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ''
"ಆಚಾರವೇ ಸ್ವರ್ಗ, ಅನಾಚಾರವೇ ನರಕ''

ಎಂಬ ಮೇಲಿನ ದಾಸರವಾಣಿ ಮತ್ತು ಬಸವಣ್ಣನವರ ವಾಕ್ಯಗಳಂತೆ ಮನುಷ್ಯ ಏನೇ ಮಾಡಿದರೂ ಅದಕ್ಕೆ ಒಂದು ರೀತಿ, ನೀತಿ, ವಿಚಾರ ಇರಬೇಕು ಇಲ್ಲದಿದ್ದರೆ ಅದು ಕಾಯಕವೇ ಅಲ್ಲ. ನುಡಿಯುವುದೊಂದನು ನುಡಿದು ಅದನ್ನು ಆಚರಿಸದಿದ್ದರೆ ಅದನ್ನು ಯಾರೂ ಗೌರವಿಸುವುದಿಲ್ಲ. ಅದಕ್ಕೆ ಕೆಳಗಿನ ಚೆನ್ನ ಬಸವಣ್ಣನವರ ವಚನವೇ ನಿದರ್ಶನದಂತಿದೆ.

ಗುರು ಸಕಲವನ್ನೂ ತಿಳಿದರೂ ಅವರಲ್ಲಿ ಒಂದು ನಿಷ್ಠೆ ಆಚಾರ ಇಲ್ಲವಾದರೆ ಅವರು ಗುರುವಲ್ಲ, ಅವನೊಬ್ಬ ಸಾಮಾನ್ಯ ಮನುಷ್ಯನಾಗುತ್ತಾನೆ. ಸದಾಚಾರವಿಲ್ಲದ ಲಿಂಗ ಅದೊಂದು ಕೇವಲ

ಕಲ್ಲೇ ವಿನಃ ಮಹತ್ವದ ಲಿಂಗವಾಗಲು ಸಾಧ್ಯವಿಲ್ಲ. ಕೇವಲ ಕೆಂಪು ವಸ್ತ್ರಧರಿಸಿ ನಡೆ ನುಡಿ ಸರಿ ಇರದಿದ್ದರೆ ಅವನು ಜಂಗಮನಲ್ಲ ಅವನು ನಮ್ಮಂತೆ ಮನುಷ್ಯನೇ, ಆಚಾರವಿಲ್ಲದ ತೀರ್ಥ ಅದು ಕೇವಲ ನೀರು. ಮಡಿ, ನೀತಿಯಿಂದ ತಯಾರಿಸದ ಅದು ಪ್ರಸಾದವಾಗಲಾರದು ಕೇವಲ ಅನ್ನವಾಗುತ್ತದೆ. ಡಾಂಬಿಕ ಭಕ್ತ ನಾಯಿಗೆ ಸಮ.

ಇದ್ದರೆ ಸತ್ಯವಂತ ಆಚಾರವಂತರ ಮನೆಯಹೊಕ್ಕು ಲಿಂಗರ್ಚನೆಮಾಡಿ ಅಲ್ಲಿನ ಲಿಂಗದ ಪಾದೋದಕ ಪ್ರಸಾದಕೊಂಡು ಜ್ಞಾನವನ್ನು ಅಥವಾ ನಿರ್ಮಲ ಗುಣವನ್ನು ಪಡೆದಾಗ ಮಾತ್ರ ಅವನು ನಿಜವಾದ ಜಂಗಮ.

ಆಚಾರವಿಲ್ಲದ ಗುರು ನರ
ಆಚಾರವಿಲ್ಲದ ಲಿಂಗ ಕಲ್ಲು
ಆಚಾರವಿಲ್ಲದ ಜಂಗಮ ಮನುಷ್ಯ
ಆಚಾರವಿಲ್ಲದ ತೀರ್ಥ ಉದಕ
ಆಚಾರವಿಲ್ಲದ ಪ್ರಸಾದ ಓಗರ
ಆಚಾರವಿಲ್ಲದ ಭಕ್ತ ನಾಯಿ
ಸತ್ಯ ಸದಾಚಾರವುಳ್ಳ ಭಕ್ತನ ಮನೆಯ ಹೊಕ್ಕು
ಲಿಂಗಾರ್ಚನೆಯ ಮಾಡುವುದು
ಸತ್ಯ ಸದಾಚಾರವುಳ್ಳ ಜಂಗಮರಲ್ಲಿ
ಪಾದೋದಕ ಪ್ರಸಾದವ ಕೊಂಡು
ಅನುಭಾವ ಕೇಳುವುದು
ಕೂಡಲ ಚೆನ್ನಸಂಗಮದೇವ ನೀ ಸಾಕ್ಷಿಯಾಗಿ[೨೦]

ಕಾಡಸೊಪ್ಪ ನಾಡಮ್ಮೆಕೆ ತಿಂದಿರದೆ?
ಉಡು ಏಕಾಂತವಾಸದಲ್ಲಿಯಿರದೆ?
ಮಂಡೂಕ ಮೀಯ್ಯದೆ?
ತುರಗ ಬ್ರಹ್ಮಚಾರಿಯೆ?
ತೋಳ ದಿಗಂಬರನೆ?
ಬಾವಿಲು ತಳಕೆಳಕಾಗಿರೆ ತಪಸಿಯೆ?
ಕೇಳಯ್ಯ ಕೂಡಲ ಚೆನ್ನಸಂಗಯದೇವಯ್ಯ
ನಿಮ್ಮನರಿಯ(ದ) ವಿರಕ್ತಿಕೆ ಹೊರಗೆಲ್ಲ ನುಂಪಟೆ
ಒಳಗೆಲ್ಲ ಸಟೆ ಸಟೆ[೨೧]

ಕಾಡು ಸೊಪ್ಪನ್ನು ನಾಡ ಮೇಕೆ ತಿಂದರೆ ಅದೇನು ಸಾಯುವುದಿಲ್ಲ. ನಕ್ಷತ್ರಗಳು ಜೊತೆಯಲ್ಲಾದರೂ ಇರುತ್ತವೆ. ಒಂಟಿಯಾದರೂ ಇರುತ್ತವೆ. ನಾನು ಒಂಟಿ ಎಂದು ಅವೇನು ಮಾಯವಾಗುವುದಿಲ್ಲ. ಕಪ್ಪೆ ಪ್ರತಿದಿನ ನೀರಿನಲ್ಲಿ ಈಜುತ್ತದೆ. ಆದರೇನು ಅದು ಜಪ ತಪಕ್ಕಾಗಿ ಅಲ್ಲ. ದನಗಳು ಬ್ರಹ್ಮಚಾರಿಯಾಗಿರಲು ಸಾಧ್ಯವಿಲ್ಲ. ತೋಳ ನೋಡಲು ದಿಗಂಬರನಾಗಿ ಕಂಡರೂ ಅದಕ್ಕೆ ಅದರದೇ ಆದ ಚರ್ಮದ ಅಂಗಿ ಇರುತ್ತದೆ. ಬಾವಲಿ ಮಲಗುವುದೇ ತಲೆ ಕೆಳಗಾಗಿ, ಆಗೆಂದು ಅದು ಕಠಿಣ ತಪಸ್ಸು, ಮಾಡುತ್ತದೆ ಎಂದು ತಿಳಿಯುವುದು ತಪ್ಪುಕಲ್ಪನೆ. ಈ ಮೇಲಿನ ಪ್ರಾಣಿಗಳಂತೆ ನಮ್ಮನ್ನು ನಾವು ಅರಿಯದೆ ಹೊರಗೆಲ್ಲ ರುದ್ರಾಕ್ಷಿ, ವಿಭೂತಿಯನ್ನು ಜನರಿಗೆ ಕಾಣುವಂತೆ ಬಳಿದುಕೊಂಡು, ಒಳಗಡೆ ದೃಢ ಭಕ್ತನಾಗದಿದ್ದರೆ ಮೇಲೆ ಹೇಳೀದ ಪ್ರಾಣಿಗಳಿಗೂ ನಮಗೂ ವ್ಯತ್ಯಾಸವಿಲ್ಲ, ಎಂಬುದನ್ನು ಚೆನ್ನಬಸವಣ್ಣನವರು ಈ ಮೇಲಿನ ವಚನದಲ್ಲಿ ತಿಳಿಸಿದ್ದಾರೆ.

ಸಾರಾಂಶ

ನಾವು ಮಾಡುವ ಕಾಯಕ ಪಾವಿತ್ರತೆಯಿಂದ ಕೂಡಿದ್ದರೆ ಅದು ಯಾವ ಸ್ಥಳದಲ್ಲಾದರೂ ಕೂಡ ಅದು ಮಹತ್ವವನ್ನು ಪಡೆದುಕೊಳ್ಳುತ್ತದೆ. ಇಲ್ಲವಾದರೆ ಅದು ಕೆಲಸಕ್ಕೆಬಾರದ ವಸ್ತು ಆಗುತ್ತದೆ. ಗೆದ್ದಲೆ ಹುಳು ಕಷ್ಟಪಟ್ಟು ಮನೆಯಮಾಡಿದರೆ ಅದರಲ್ಲಿ ಹಾವು ಮನೆಯಮಾಡಿ ತನ್ನ ದುಷ್ಕಾರ್ಯ ಮಾಡುತ್ತದೆ. ಸೂಳೆ ಮನೆ ಮಾಡಿದರೆ ಆಕೆ ಪವಿತ್ರವಾಗಿ ಉಳಿಯಲಾರಳು. ಏಕೆಂದರೆ ಆಕೆಯ ಕಾಯಕವೇ ಅಪವಿತ್ರ, ಬಸವಣ್ಣ ಮನೆಯಮಾಡಿದಡೆ ಅಲ್ಲಿ ಪ್ರಸಾದ ನೆಲೆಸಿರುತ್ತದೆ ಎಂಬುದೇ ಈ ಕೆಳಗಿನ ವಚನಸಾರ.

ಗೆದೆಲೆ ಮನೆಯ ಮಾಡಿದರೆ ಹಾವಿಂಬುಗೊಂಡಿತ್ತು
ವೇಶಿ ಮನೆಯ ಮಾಡಿದರೆ ಎಂಜಲಿಂಬುಗೊಂಡಿತ್ತು
ಬಸವಣ್ಣ ಮನೆಯ ಮಾಡಿದರೆ ಪ್ರಸಾದವಿಂಬುಗೊಂಡಿತ್ತು
ಕೂಡಲ ಚೆನ್ನಸಂಗಮದೇವ ನೀ ಸಾಕ್ಷಿಯಾಗಿ[೨೩]

ಸಗಣಿಯ ಬೆನಕನ ಮಾಡಿ ಸಂಪಗೆಯರಳಿನಲ್ಲಿ ಪೂಜಿಸಿದರೆ
ಗಂಜಳನಾರುವುದಲ್ಲದೆ ರಂಜನೆಯಿಲ್ಲವಯ್ಯ
ಮಣ್ಣಪುತ್ಥಳಿಯ ಮಾಡಿ ಮಜ್ಜನಕ್ಕೆರದರೆ
ನಿಚ್ಚ ನಿಚ್ಚಕೆ ತಾ ಕೆಸರಾಗುವುದಲ್ಲದೆ ನಿಶ್ಚಳವಿಲ್ಲವಯ್ಯ
ಸೃಷ್ಟಿಯ ಮೇಲಣ ಕಣೆಯ ತಂದು
ಲೋಕದ ಮಾನವರೆಲ್ಲ ಭಕ್ತರ ಮಾಡಿದರೆ
ಕೆಟ್ಟವರು ಭಕ್ತರಪ್ಪರೆ ಕೂಡಲ ಚೆನ್ನಸಂಗಮದೇವ[೨೪]

ಈ ಮೇಲಿನ ವಚನವು ಡಾಂಬಿಕ ಭಕ್ತರ ಕುರಿತು ಹೇಳುವಂತಹದ್ದು ಸಗಣಿಯಲ್ಲಿ ಗಣೇಶನ ಮಾಡಿ ಸಂಪಿಗೆ ಹೂವಿನಿಂದ ಪೂಜಿಸಿದರೆ ಅದು ತನ್ನ ನೈಜವಾದ ಗಂಜಳದ ವಾಸನೆಯನ್ನು ನೀಡುತ್ತದೆಯೇ ವಿನಃ ಸುವಾಸನೆಯನ್ನು ನೀಡಲಾರದು. ಮಣ್ಣಿನ ಗೊಂಬೆಯನ್ನು ಮಾಡಿ ಅದಕ್ಕೆ ಮಜ್ಜನಕ್ಕೆರೆದರೆ ಅದು ಮೈಯಲ್ಲ ಕೆಸರಾಗುವುದಲ್ಲದೆ ಶುಭ್ರವಾಗಲಾರದು. ಲೋಕದಲ್ಲಿ ನೆಲಸಿರುವ ಮೈತುಂಬ ವಿಭೂತಿ ಬಳಿದುಕೊಂಡು ನಾನು ಭಕ್ತನೆಂದು ತೋರ್ಪಡಿಸಿಕೊಳ್ಳುವವರೆಲ್ಲ ಭಕ್ತರಾಗಲು ಸಾಧ್ಯವಿಲ್ಲ ಎಂಬುದಕ್ಕೆ ಮಾರ್ಮಿಕವಾಗಿ ಸಗಣಿಯ ಬೆನಕನ ಉದಾ. ನೀಡಿದ್ದಾರೆ. ಅಂದರೆ ನಿಜವಾದ ಭಕ್ತರು ಮಾತ್ರ ಭಗವಂತನ ಕೃಪೆಗೆ ಪಾತ್ರರಾಗಲು ಸಾಧ್ಯವೆಂಬುದೇ ಈ ಮೇಲಿನ ವಚನದ ಸಾರಾಂಶ.

**ಸಾರಾಂಶ**

"ಬೆಳ್ಳಗಿರುವುದೆಲ್ಲ ಹಾಲಲ್ಲ" ಎಂಬಂತೆ ನೋಡಲು ಒಂದೇ ರೂಪದಲ್ಲಿ ಕಂಡರೂ ಅವೆರಡರ ಗುಣಗಳೇ ಬೇರೆ. ರೂಪ ಒಂದೇ ಆದರೂ ಗುಣ ಒಂದೇ ಆಗಲಾರದು. ಚಿನ್ನದ ಕೆಲಸಕ್ಕೆ ಹಿತ್ತಾಳೆ ಕೆಲಸವೆಂಬರು. ಸಕ್ಕರೆಯಬಣ್ಣ ಬಿಳಿದು ಮರಳು ಬಿಳಿ ಆದರೆ ಅದರ ರುಚಿಯೇ ಬೇರೆ, ಇದರ ರುಚಿಯೇ ಬೇರೆ. ಕರ್ಪೂರ ಬಿಳಿ, ಉಪ್ಪು ಬಿಳಿ ಬಣ್ಣ ಆದರೆ ಅದರ ಗುಣವೇ ಬೇರೆ. ಇದರ ಗುಣವೇ ಬೇರೆ. ಎರಡನ್ನೂ ಒಂದೇ ಕೆಲಸಕ್ಕೆ ಉಪಯೋಗಿಸಲು ಬರುವುದಿಲ್ಲ. ಸಿಂಹದ ನಡು ಸಣ್ಣ, ನಾಯಿಯ ನಡು ಸಣ್ಣ, ಆದರೆ ಸಿಂಹವನ್ನು ನಾಯಿಯೆನ್ನಲಾಗದು, ನಾಯಿಯನ್ನು ಸಿಂಹವೆನ್ನಲಾಗದು. ಶಿವಜ್ಞಾನಿಗೂ ಸಾಮಾನ್ಯ ಮನುಷ್ಯನಿಗೂ ವ್ಯತ್ಯಾಸವಿದೆ ಇಬ್ಬರೂ ಮನುಷ್ಯರೇ ಆದರೆ. ಅವರ ವ್ಯಕ್ತಿತ್ವ ಗುಣಗಳೇ ಬೇರೆ, ಅಂದರೆ ಚಿನ್ನ, ಸಕ್ಕರೆ, ಕರ್ಪೂರ, ಸಿಂಹ, ಜ್ಞಾನಿ ಇವುಗಳಿಗೆ ಹಿತ್ತಾಳೆ, ಮರಳು, ಉಪ್ಪು, ನಾಯಿಯನ್ನು ನಾವು ಕೂಡ ಸಮವೆಂದುಕೊಂಡರೆ ಅದು ಅಪಹಾಸ್ಯ ಮಾಡಿದಂತೆ ಎಂಬುದೆ ಚೆನ್ನ ಬಸವಣ್ಣನವರ ಕೆಳಗಿನ ವಚನದ ಸಾರಾಂಶ.

ಸುವರ್ಣದ ಕೆಲಸಕ್ಕೆ
ಹೊಂಬಿತ್ತಾಳೆಯ ಕೆಲಸವೆಂಬರು
ಸಕ್ಕರೆ ಮೃದುವೆಂದರೆ
ಮರಳು ಮೃದುವೆಂಬರು
ಕಪ್ಪುರ ಬಿಳಿದೆಂಥರೆ
ಉಪ್ಪು ಬಿಳಿದೆಂಬರು
ಸಿಂಹದ ನಡು ಸಣ್ಣವೆಂದರೆ
ನಾಯಿ ನಡು ಸಣ್ಣವೆಂಬರು
ಶಿವಜ್ಞಾನಿಗಳಿಗೆ

ಲೋಕ ಜ್ಞಾನಿಗಳು ಸಮವೆಂಬರು
ಇದು ಹಂಚ ಹಿಡಿದು ಮೈಯಲ್ಲ ಮಸಿಯಾದಂತಾಯಿತ್ತು ಕಾಣಾ
ಕೂಡಲ ಚೆನ್ನ ಸಂಗಮದೇವ.[25]

**ಸಿದ್ಧರಾಮನ ವಚನ**

ಸಕಲ ನಿಷ್ಕಲಕ್ಕೆಲ್ಲ ಬಸವ ನಾಮಾಕ್ಷರದ
ದೆಸೆ ತಾನು ತ್ರೈಲಿಂಗ ಮೂಲವಾಗಿ
ಬಸವನನುಮಿಷಗಂದು ಗುರುವಾದ ಸಂಬಂಧ
ದೆಸೆಯೆನಗೆ ಆಯಿತ್ತೆ ಕಪಿಲಸಿದ್ದಮಲ್ಲಿಕಾರ್ಜುನಾ[26]

ಇಡೀ ಪ್ರಪಂಚಕ್ಕೆಲ್ಲಾ ಬಸವನಾಮಾಕ್ಷರವೇ ತುಂಬಿದೆ. ಎಲ್ಲ ಸ್ಥಳಗಳಲ್ಲಿ ಲಿಂಗರೂಪವಾಗಿ ಇಡೀ ಜಗತ್ತನ್ನೇ ಆವರಿಸಿದ್ದಾನೆ. ಅಂತಹ ಬ್ರಹ್ಮಾಂಡ ಸ್ವರೂಪವೇ ಎನಗೆ ಸಹಕಾರಿಯಾಗಿರಲು ಅವರೇ ನಮ್ಮ ಗುರುವೆಂದು ಸ್ವೀಕರಿಸಿರುವೆನು. ಕಪಿಲಸಿದ್ದ ಮಲ್ಲಿಕಾರ್ಜುನ ಎಂದು ಹೇಳುತ್ತಾರೆ.

**ಅಮುಗೆ ರಾಯಮ್ಮನ ವಚನ**

ವಿಶ್ವಮಯ ರೂಪವಾಗಿ ಬಂದೆಯಯ್ಯಾ
ಭಕ್ತಿಗೆ ಎನ್ನ ಮನಕ್ಕೆ ಸತಿ ನಿಂದ ನಿಲವು
ಅಮುಗೇಶ್ವರಲಿಂಗಕ್ಕೆ ಮಾಟವಾಯಿತ್ತು[27]

ಈ ಮೇಲಿನ ವಚನದಲ್ಲಿ ಅಮುಗೆ ರಾಯಮ್ಮ ಅಮುಗೇಶ್ವರ ಎಂಬ ಅಂಕಿತನಾಮದಿಂದ ವಚನವನ್ನು ರಚಿಸಿದ್ದು ತನ್ನ ಆರಾಧ್ಯ ದೈವವಾದ ಅಮುಗೇಶ್ವರನೇ ವಿಶ್ವವ್ಯಾಪಿಯಾಗಿದ್ದಾನೆ. ಆತನ ಮೇಲಿನ ಭಕ್ತಿ ನನ್ನನ್ನು, ನಿಮ್ಮಲ್ಲಿ ನೆಲೆನಿಲ್ಲುವಂತೆ ಮಾಡಿದೆ. ನಿಮ್ಮ ಮಾಹೆ ನನ್ನಲ್ಲಿ ತುಂಬಿ ನಿಮ್ಮನ್ನು ಅನವರತ ಆರಾಧಿಸುವಂತೆ ಮಾಡಿದೆ ಎಂದು ಈ ವಚನದಲ್ಲಿ ತಿಳಿಸಿದ್ದಾಳೆ.

**ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ವಚನ**

ಅಹುದು ಅಹುದು, ಲಿಂಗವಿಲ್ಲದ ಶಿಷ್ಯನ
ಅರಿಯಿಸಬಲ್ಲ ಗುರುವು ಲಿಂಗವಿಲ್ಲದ ಗುರುವು
ಲಿಂಗವಿಲ್ಲದೆ ಇದ್ದ ಗುರುವನರಿಯಬಲ್ಲ ಶಿಷ್ಯ
ಶಿಷ್ಯನನರಿಯಬಲ್ಲ ಗುರು
ಇವರಿಬ್ಬರ ಭೇದನ ನೀನೆ ಬಲ್ಲೆ
ಮಸಣಯ್ಯ ಪ್ರಿಯ ಗಜೇಶ್ವರಾ[28]

ಈ ವಚನದಲ್ಲಿ ಗಜೇಶ ಮಸಣಯ್ಯ. ಮಸಣಯ್ಯ ಪ್ರಿಯ ಗಜೇಶ್ವರಾ ಎಂಬ ಅಂಕಿತದಿಂದ ಗುರುಶಿಷ್ಯರ ಸಂಬಂಧವನ್ನು ಇಲ್ಲಿ ವಿವರಿಸಿದ್ದಾನೆ. ಲಿಂಗವಿಲ್ಲದೆ ಗುರುವಿಲ್ಲ, ಗುರುವಿಲ್ಲದೆ ಶಿಷ್ಯನಿಲ್ಲ,

ಒಬ್ಬ ಒಳ್ಳೆಯಶಿಷ್ಯನಿಗೆ ಒಳ್ಳೆಯಗುರುವು ಸಿಗುವುದು ಎಷ್ಟು ಮುಖ್ಯವೋ, ಒಳ್ಳೆಯ ಗುರುವಿಗೆ ಒಳ್ಳೆಯ ಶಿಷ್ಯ ಸಿಗುವುದು ಅಷ್ಟೇ ಮುಖ್ಯ. ಗುರುವನ್ನು ಅರಿತು ಶಿಷ್ಯ ನಡೆಯಬೇಕು. ಶಿಷ್ಯನ ಮಟ್ಟವನ್ನು ಅರಿತು ಗುರು ಬೋಧಿಸಬೇಕು ಇವರಿಬ್ಬರ ಭೇದವನ್ನು ನೀನೆ ಬಲ್ಲ ಗಜೇಶ್ವರಾ ಎಂದು ಮಸಣಯ್ಯ ಇಲ್ಲಿ ತಿಳಿಸಿದ್ದಾನೆ.

## ನೀಲಮ್ಮನ ವಚನಗಳು

ಅಡಲಿಲ್ಲದ ಊಟವನುಣಹೋದಡೆ
ಆ ಊಟವೆನಗೆ ವಿಷವಾಯಿತ್ತಯ್ಯ ಸಂಗಯ್ಯ[೫೯]

ಈ ವಚನದಲ್ಲಿ ನೀಲಮ್ಮ ಕಾಯದ ಮಹತ್ವವನ್ನು ತಿಳಿಸಿದ್ದಾಳೆ. ಅಡಲಿಲ್ಲದ ಎಂದರೆ ಕಷ್ಟಪಟ್ಟು ಅಡುಗೆ ಮಾಡಿಕೊಂಡು ಉಣ್ಣುವುದು ಎಂದರ್ಥ. ಹಾಗೆ ಮಾಡದೆ ಸೋಮಾರಿಯಾಗಿ ಯಾರೋ ಮಾಡಿದ ಅಡುಗೆಯನ್ನು ಉಣ್ಣಲು ಹೋದರೆ ಅದು ನಮಗೆ ವಿಷವಾಗುತ್ತದೆ.

ಬಸವಣ್ಣನವರು ಹೇಳುವಂತೆ "ಕಾರೆಯ ಸೊಪ್ಪಾದರೂ ಕಾಯಕದಿಂದ ಬರಬೇಕು" ಎನ್ನುವಂತೆ ನೀಲಮ್ಮನವರು ಕೂಡ ಇಲ್ಲಿ ಕಾಯಕದ ಮಹತ್ವವನ್ನು ತಿಳಿಸಿದ್ದಾರೆ.

## ಸಾರಾಂಶ

"ಎಲ್ಲವೂ ಶಿವನೆಂದರೆ ನಮಗಾವ ಭಯವಿಲ್ಲವೆಂಬಂತೆ" ನನ್ನದು ಏನೂಇಲ್ಲ. ಎಲ್ಲವೂ ನಿನ್ನದೇ, ಎಂದೊಡೆ ಯಾವ ತೊಂದರೆಯೂ ಇಲ್ಲ. ನಾನು ಅರಸುವ ವಸ್ತುಗಳೆಲ್ಲ ನಿನ್ನದಯದಿಂದ ಕಣ್ಣಿಗೆ ಕಂಡಿತು. ನಾನು ಬಯಸಿದ್ದೆಲ್ಲ ಕೈಗೂಡಿತು. ನಾನೇ ಧನ್ಯ ಏಕೆಂದರೆ ನಾನು ಅಂದುಕೊಂಡದ್ದೆಲ್ಲ ಶಿವನ ದಯದಿಂದ ದೊರಕಿತು. ನಾನು ನನ್ನದೆಂಬ ಭಯವನ್ನು ಬಿಟ್ಟರೆ ನಿಸ್ಸಂಗಿಯಾದರೆ ಸಂಗಯ್ಯನಲ್ಲಿ ನಾನೂ ಒಬ್ಬಳಾಗುವೆ ಎಂದು ಹೇಳುತ್ತಾಳೆ.

ಅರಸರಸಲು ನಾನು
ಅರಸುವ ವಸ್ತು ಎನ್ನ ಕಣ್ಣಿಗೆ ಕಾಣಲಾಯಿತ್ತು
ಬಯಕೆಯ ಬಯಸಲು ನಾನು
ಬಯಸುವ ವಸ್ತು ಕಯಿಗೂಡಿತ್ತು
ನಾನೆಂತಹ ಪುಣ್ಯವುಳ್ಳವಳೋ
ನಾನೆಂತಹ ಮುಕ್ತಿಯುಳ್ಳವಳೋ
ನಾನು ಭಯದ ಸಂಗವ ಹರೆದು ನಿಸ್ಸಂಗಿಯಾದೆನು
ಸಂಗಯ್ಯನಲ್ಲಿ ದ್ವಂದ್ವಕರ್ಮರಹಿತಳು[೬೦]

ಇರವರೆದು ಪರವ ಮರದೆ
ಆ ಪರವನರೆದು ಪರಬ್ರಹ್ಮನ ಕಂಡೆನಯ್ಯ
ಆ ಪರಬ್ರಹ್ಮನ ಸುಯಿದಾನ ಮಾಡಿ
ಸುಖವ ಪಡೆದನಯ್ಯ ಸಂಗಯ್ಯ[೬೧]

ಮನುಷ್ಯರಾದ ನಾವೆಲ್ಲ ಭೂಲೋಕದಲ್ಲಿ ಹುಟ್ಟಿದ ಮೇಲೆ ಸುಖ ಬೋಗಗಳಿಗೆ ಬಿದ್ದು ಅದನ್ನೇ ಸರ್ವಸ್ವವೆಂದು ತಿಳಿದುಕೊಂಡಿರುತ್ತೇವೆ. ನಮ್ಮನ್ನು ಸೃಷ್ಟಿಮಾಡಿದ ದೈವವನ್ನು ಮರೆತು ಮನ ಬಂದಂತೆ ವರ್ತಿಸುತ್ತೇವೆ. ನಂತರ ಆ ಸುಖವನ್ನೆಲ್ಲ ಉಂಡು ನಂತರ ದುಃಖ ಬಂದಾಗ ದೇವರನ್ನು ನೆನಪು ಮಾಡಿ ಕೊಳ್ಳುತ್ತೇವೆ. ಆಗ ದೇವರ ಇರುವಿಕೆ ಮತ್ತು ಅವರ ಕಡೆ ನಮ್ಮ ಚಿತ್ತವನ್ನು ಅರಿಸಿ ಅನುದಿನ ದೇವರ ಪ್ರಾರ್ಥನೆಯನ್ನು ಮಾಡಿ ಅನಂತ ಸುಖವನ್ನು ಪಡೆದೆನು ಎಂದು ನೀಲಮ್ಮ ಈ ವಚನದಲ್ಲಿ ತಿಳಿಸಿದ್ದಾರೆ.

**ಸಾರಾಂಶ**

ನಮಗೆ ಎಲ್ಲಾ ಇದ್ದು ಏನೂ ಇಲ್ಲವೆಂದು ಹೇಳಿಕೊಳ್ಳುವ ಗುಣ ಅಂದರೆ ಕ್ಷಣಿಕದ ಸಾಂಸಾರಿಕ ಬಂಧುತ್ವವನ್ನು ಬಿಟ್ಟು ದೀನತೆಯನ್ನು ಹೊಂದುವುದು. ಅಂದರೆ ನಮ್ಮ ದಿನನಿತ್ಯದ ಜಂಜಾಟವನ್ನು ಬಿಟ್ಟು ಎನಗೆ ಎಲ್ಲವೂ ನೀನೆ! ನಿನ್ನನ್ನು ಬಿಟ್ಟರೆ ನನಗಾರು ಗತಿಯಿಲ್ಲ. ಏನೇ ಕಷ್ಟ ಬಂದರೆ ಕಾಪಾಡುವವನು ನೀನೇ ಕಳೆಯುವವನು ನೀನೇ, ನಿನ್ನನ್ನು ಬಿಟ್ಟರೆ ಬೇರೆ ಯಾವ ದೇವರ ಪ್ರತಿಯೂ ಕೋಪ ನನ್ನಲ್ಲಿ ಇಲ್ಲವಯ್ಯ ನೀನೇ ನನ್ನ ಜೀವ. ನೀನೇ ನನ್ನ ದೈವ. ನನಗೆ ನಿನ್ನ ಮುಖ ಕಾಣದಿದ್ದರೂ ಆ ಮುಖದ ಸ್ವರೂಪವನ್ನು ಯಾವಾಗಲೂ ಕಾಣುತ್ತಿರುತ್ತೇನೆ. ಅಂದರೆ ಈ ವಚನದಲ್ಲಿ ದೇವರನ್ನು ಕುರಿತು ಸಕಲವೂ ನೀನೇ ಎಂಬ ಭಾವನೆ ಹೊಂದಿರುವುದನ್ನು ಕಾಣುತ್ತೇವೆ.

ಎನಗಿನ್ನಾರು ಗತಿಯಲ್ಲವಯ್ಯ
ಎನಗಿನ್ನಾರು ಪ್ರತಿಯಿಲ್ಲವಯ್ಯ
ಎನ್ನಯ್ಯನ ಪ್ರಾಣವೇಯಾನಾದ ಕಾರಣ
ಎನನಿನ್ನಾರು ಸರಿಯ ಕಾಣೆಯನಯ್ಯ
ಎನಗೆ ಮುಖವನರಿಯಿದಿರಲು
ಮುಖ ಸ್ವರೂಪಿಯಾದೆನಯ್ಯ ಸಂಗಯ್ಯ[೬೨]

ಎಲೆ ಲಿಂಗವೆ
ಹೆಸರಿಲ್ಲದ ರೂಪದೋರೆ ಬಯಲಿಂಗೆ ಬಯಲನೆ ಕೂಡಿದೆಯಲಾ
ಭಾವವಿಲ್ಲದ ವಸ್ತುವಾಗಿ ಬಯಲಿಂಗೆ ಬಯಲನೆ ಕೂಡಿದೆಯಲಾ
ಮುನ್ನಲೊಂದು ರೂಪು ಮಾಡಿದೆ ಎನ್ನ ನೀನು

ಈಗಲೊಂದು ರೂಪು ಮಾಡಿದ ಎಲೆ ಲಿಂಗವೆ
ಬಸವನರಸಲು ನಾನು ಬಯಲನೆಮ್ಮಿ
ಮನೋಹರ ಮೂರ್ತಿಯಾದೆನಯ್ಯ ಸಂಗಯ್ಯ[೬೩]

ಲಿಂಗದ ಸ್ವರೂಪ ಮತ್ತು ಲಿಂಗದ ಇರುವಿಕೆ ಹಾಗೂ ಲಿಂಗದೊಡನೆ ನಮ್ಮ ಸಂಬಂಧವನ್ನು ಕುರಿತು ಈ ಮೇಲಿನ ವಚನದಲ್ಲಿ ತಿಳಿಸಲಾಗಿದೆ.

ಲಿಂಗಕ್ಕೆ ಬೇರ ಬೇರ ರೀತಿಯ ಹೆಸರಿಲ್ಲ. ಮತ್ತು ವಿವಿಧ ರೀತಿಯ ರೂಪವೂ ಇಲ್ಲ ನಿರಾಕಾರ ಮತ್ತು ನಿಕಾಯ ಬಯಲಲ್ಲಿ ಬೆರೆತು ಬಯಲನ್ನೇ ಕೂಡುತ್ತದೆ. ಭಾವವಿಲ್ಲದ ವಸ್ತುವಾಗಿ ನೀನು ಬಯಲರೂಪವನೇ ಆವರಿಸಿರುವೆ ನಿನ್ನಿಂದ ನಾನು. ನಮ್ಮನ್ನು ಮೊದಲು ಒಂದು ರೂಪ ಮಾಡಿದೆ. ಈಗ ಒಂದು ರೂಪ ಮಾಡಿದೆ ಎಲೆ ಲಿಂಗವೇ ನಮ್ಮನ್ನು ನೀನು ಪರೀಕ್ಷಿಸುವೆ. ನೀನು ಬಸವನನಾಗಲು ನಾನು ಬಯಲಿನ ರೂಪವನ್ನು ಪಡೆಯುವೆ, ಎಲ್ಲಾ ತಿಳಿದಿದೆ ಎಂದು ಹೇಳದೆ ನನಗೇನೂ ತಿಳಿದಿಲ್ಲ ಎಂದು ಕೊಂಡು ನಿನ್ನಂತೆ ನಾನಾಗಲು ಬಯಸುವೆ ಎಂದು ನೀಲಮ್ಮ ಈ ಮೇಲಿನ ವಚನದಲ್ಲಿ ತಿಳಿಸಿದ್ದಾಳೆ.

**ಸಾರಾಂಶ**

ಪರಸ್ತ್ರೀ, ಪರಧನದ ಬಗ್ಗೆ ಆಸೆಪಡಬಾರದು. ಕಾಮ ಲೋಭ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗಗಳನ್ನು ಬಿಡಬೇಕು. ಅಂತವನು ಶರಣ. ಕಾಮದ ಅಂಗನ್ನು ತೊರೆಯಬೇಕು ಅವನೇ ನಿಜವಾದ ಶರಣ. ಪರರ ವಸ್ತುಗಳ ಬಗ್ಗೆ ವ್ಯಾಮೋಹ ಇರಬಾರದು. ಅದರ ಬಗ್ಗೆ ಕನಸಿನಲ್ಲಿಯೂ ಚಿಂತಿಸಬಾರದು ಅವನೇ ಶರಣ. ಅದೂ ಬೇಕು ಇದೂ ಬೇಕು ಎಂಬ ಉಭಯ ಸಂಕಟವನ್ನು ಪಡ ಬಾರದು ಯಾವಾಗಲು ಏಕಚಿತ್ತದಿಂದ ಕೂಡಿರಬೇಕು ಅವನೇ ಶರಣ. ಪ್ರಾಣದ ಸ್ಥಿತಿಯೇ ಇಲ್ಲದ ಶರಣರಿಗೆ ಪ್ರಸಾದವೇ ಬೇಕಿಲ್ಲ. ಇಂತಹ ಕ್ಷುಲ್ಲಕ ವಿಚಾರದ ಬಗ್ಗೆ ಯೋಚಿಸದೆ ಬಸವಯ್ಯನಂತಾಗಬೇಕು ಎಂದು ಹಂಬಲಿಸಬೇಕು ಎಂದು ನೀಲಮ್ಮ ಈ ವಚನದಲ್ಲಿ ತಿಳಿಸಿದ್ದಾಳೆ.

ಕಾಮದ ಹಂಗಿಗನಲ್ಲ ಶರಣ
ಮೋಹದ ಇಚ್ಛೆಯವನಲ್ಲ ಶರಣ
ಉಭಯದ ಸಂಗದವನಲ್ಲ ಶರಣ
ಪ್ರಾಣದ ಕುರುಡಿಲ್ಲದ ಶರಣಂಗೆ
ಪ್ರಸಾದದ ನೆಲೆಯಿಲ್ಲವಯ್ಯ
ಎನಗೇನು ತಲೆದೋರದ ಮುಸುಕಿಟ್ಟು
ಬಳವಳಿದನಯ್ಯ ಸಂಗಯ್ಯ ನಿಮ್ಮಲ್ಲಿ[೬೪]

ಕಾಮನವಳಿದ ಹೆಣ್ಣಲ್ಲ ನಾನು
ಕಾಮವುಂಟೆನಗೆ
ಕಾಯ ಸಂಸಾರವಳಿಯತ್ತೆಂಬ
ಕಾಮಸೀಮ ನಿಸ್ಸೀಮೆಯಳಿದು
ಕಲ್ಪಿತನ ಕಂಡುಳಿದು ಬದುಕಿದೆನಯ್ಯ ಸಂಗಯ್ಯ[೬೯]

ಸಂಸಾರವಿಲ್ಲದೆ ಯೋಗಿಯಾಗುವುದು ಬಹು ಸುಲಭ. ಆದರೆ ಸಂಸಾರವನ್ನು ಕಟ್ಟಿಕೊಂಡು ಯೋಗಿಯಾಗುವುದೇ ದೊಡ್ಡದು. ಏಕೆಂದರೆ ಸಂಸಾರದ ಕಷ್ಟವಿಲ್ಲದಿದ್ದಾಗ ಎಂತವರು ಬೇಕಾದರೂ ಮುನಿಗಳಾಗಬಹುದು. ಆದರೆ ಸಂಸಾರದಲ್ಲಿದ್ದು ಸನ್ಯಾಸಿಯಾಗಬೇಕು. ಅವನೇ ಶ್ರೇಷ್ಠ ಅದಕ್ಕಾಗಿ ಇಲ್ಲಿ ನೀಲಮ್ಮ ತನ್ನ ಗುಣವನ್ನು ಮುಚ್ಚಿಕೊಳ್ಳದೆ ವ್ಯಕ್ತಪಡಿಸಿದ್ದಾಳೆ.

ನನ್ನಲ್ಲಿ ಕಾಮವಿಲ್ಲ ಎಂದು ಹೇಳಿಕೊಳ್ಳುವುದಿಲ್ಲ ನನಗೂ ಕಾಮವುಂಟು. ಈ ದೇಹದ ಸಂಸಾರವೆಂಬ ಕಾಮಸೀಮೆಯನ್ನು ಕಳೆದುಕೊಂಡು ನಿಸ್ಸೀಮೆಯಾದೆನು ಆಗ ನಾನು ನಿಜವಾದ ವಿರಾಗಿಯಾಗಲು ಸಾಧ್ಯ. ಸಂಸಾರದ ಸುಖವನ್ನು ಉಂಡು ಈಗ ಪಾರಮಾರ್ಥಿಕದ ಬಗ್ಗೆ ನನ್ನ ಚಿತ್ತ ನಡೆಯಹತ್ತಿದೆ ಎಂಬುದನ್ನು ನೀಲಮ್ಮ ಈ ವಚನದಲ್ಲಿ ತಿಳಿಸಿದ್ದಾಳೆ.

**ಸಾರಾಂಶ**

ನಾಡನ್ನು ಆಳಲೆಂದು ರಾಜ ಹೋದರೆ ಆ ನಾಡೇ ರಾಜನಿಗೆ ವೈರಿಯಾಗುವಂತೆ. ನಾನು ಅದೇ ರೀತಿ ಮದುವೆ ಬೇಡವೆಂದರೂ ಕೂಡ ಕೊನೆಗೆ ಮದುವೆ ಮಾಡಲು ಮುಂದಾದರು. ಅಂತಹದ್ದನ್ನು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡು ವಿವಾಹವಾಗಲು ಸಿದ್ದನಾದೆ. ಅದು ಯಾರ ಜೊತೆ ಸಂಗಯ್ಯನಲ್ಲಿ ಅನುರಕ್ತಳಾದೆನು ಎಂದು ನೀಲಮ್ಮ ಹೇಳುತ್ತಾಳೆ.

ಜೀವನದ ಪರಮಾನಂದ ದೊರೆಯುವುದು ಅನಂತ ಸುಖದಲ್ಲಿ. ಆ ಅನಂತ ಸುಖ ದೊರೆಯುವುದು ಆ ಭಗವಂತನಲ್ಲಿ. ಆಗಾಗಿ ಅನವರತ ಭಗವಂತನನ್ನು ಆರಾಧಿಸಿ ಅವರಲ್ಲಿಯೇ ಮುಕ್ತಿಯನ್ನು ಪಡೆಯಬೇಕೆಂದು ಈ ಮೂಲಕ ತಿಳಿಸಿದ್ದಾಳೆ.

ನಾಡನಾಳ ಹೋದರೆ
ಆ ನಾಡು ಆಳುವ ಒಡೆಯರಿಗೆ ನಾಡೆ ಹಗೆಯಾಯಿತ್ತು
ಹಗೆಯಳಿದು ನಿಸ್ಸಂಗವಾಯಿತ್ತು
ನಿಸ್ಸಂಗ ವೇದ್ಯವಾಗಿ
ಸಂಗಯ್ಯನಲ್ಲಿ ಮುಕ್ತಳಾದೆನು ನಾನು[೭೦]

ಸಾರಾಂಶ

ಭಕ್ತಿಯಿಂದ ಭಜಿಸದಲ್ಲದೆ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ನಮ್ಮ ತನುಮನವನ್ನು ಏಕಚಿತ್ತದಿಂದ ಕ್ರೋಢೀಕರಿಸಿ ಭಗವಂತನನ್ನು ಭಜಿಸಿದಾಗ ನಮಗೆ ಮುಕ್ತಿಯು ಸಿಗುತ್ತದೆ. ಇಲ್ಲವಾದಲ್ಲಿ ಅದನ್ನೆಂದೂ ಪಡೆಯಲು ಸಾಧ್ಯವಿಲ್ಲ. ಭಕ್ತಿಯಿಲ್ಲದೆ ಮುಕ್ತಿಯನ್ನು ಪಡೆಯಲು ಹೋದರೆ ಗೋವಿನ ಡುಬ್ಬದ ಮೇಲೆ ಕುಳಿತು ಹಾಲನ್ನು ಕರೆದಂತೆ. ಅಂದರೆ ಇಲ್ಲಿ ಡುಬ್ಬದಿಂದ ಹಾಲು ಬರಲು ಹೇಗೆ ಸಾಧ್ಯವಿಲ್ಲವೋ ಅದೇ ರೀತಿ ಮುಕ್ತಿಯೂ ಸಿಗದು. ಸಂಗಯ್ಯನನ್ನು ಅನವರತ ಭಜಿಸಿ ಅವರ ಪ್ರಸಾದವೆಂಬ ಮುಕ್ತಿಯನ್ನು ಪಡೆಯಬಹುದು. ಇಲ್ಲವಾದರೆ ಅದೆಂದಿಗೂ ಸಾಧ್ಯವಿಲ್ಲ ಎಂಬುದನ್ನು ಈ ಕೆಳಗಿನ ಉಪಮೇ ಮೂಲಕ ತಿಳಿಸಿದ್ದಾರೆ.

ನಾವು ಪ್ರಯಾಣ ಮಾಡದೆ ನಮ್ಮ ಗುರಿ ಹತ್ತಿರವಾಗುವುದು ಸಾಧ್ಯವಿಲ್ಲ. ನಡೆದಾಗ ಮಾತ್ರ ನಮ್ಮ ಗುರಿ ತಲುಪಲು ಸಾಧ್ಯ. ಹಿಂದಿನದನ್ನು ತಿಳಿಯದೇ ಹೋದರೆ ಪೂಜೆ ಮಾಡಲು ಸಾಧ್ಯವಿಲ್ಲ. ರೈತನಿಗೆ ಹೊಲವಿಲ್ಲದೆ ಬೆಳೆ ಬೆಳೆದು ಫಲ ಕಾಣುವುದು ಸಾಧ್ಯವಿಲ್ಲ. ಬೆಳೆ ಕಾಣಬೇಕಾದರೆ ಮೊದಲು ಹೊಲವಿರಬೇಕು. ಬೇಟೆಯನಾಡುವುದು ಏತಕೋಸ್ಕರ. ನಮ್ಮ ಆಹಾರಕ್ಕಾಗಿ ಬೇಟೆಯಾಡಲು ಪ್ರಾಣಿಗಳಿರಬೇಕು, ಪ್ರಾಣಿಗಳೇ ಇಲ್ಲದೇ ಬೇಟೆಯಾಡಲು ಸಾಧ್ಯವಿಲ್ಲ. ಅದೇ ರೀತಿ ದೇವರನ್ನು ಒಂದೇ ಚಿತ್ತದಿಂದ ಭಜಿಸದೆ, ಮುಕ್ತಿಯೆಂಬ ಪ್ರಸಾದ ಪಡೆಯಲು ಸಾಧ್ಯವಿಲ್ಲ ಎಂಬುದನ್ನು ಈ ಕೆಳಗಿನ ವಚನದಲ್ಲಿ ತಿಳಿಸಿದ್ದಾಳೆ.

ಪಯಣವಿಲ್ಲದ ಗಮನವ ಕಂಡವರುಂಟೆ?
ಗತಯಿಲ್ಲದ ಪೂಜೆಯ ಮಾಡಿದವರುಂಟೆ?
ಹೊಲನಿಲ್ಲದೆ ಫಲವನುಂಡವರುಂಟೆ?
ಮೃಗವಿಲ್ಲದೆ ಬೇಟೆಯನಾಡಿದವರುಂಟೆ?
ಸಂಗಯ್ಯ ಮುಖವಿಲ್ಲದೆ ಪ್ರಸಾದವನುಂಡವರುಂಟೆ?[೩೭]

ಲಿಂಗಸಂಗದಲ್ಲಿ ಹುಟ್ಟಿ
ಜಂಗಮದ ಸಂಗದಲ್ಲಿ ಬೆಳೆದು
ಭೇದವಡಗಿ ಬೆಳಗು ನಿರ್ವಯಲಾಗಲು
ಆನು ಸುಖಿಯಾದೆನಯ್ಯ ಸಂಗಯ್ಯ[೩೮]

"ಗುಣ ನೋಡಿ ಗೆಳೆತನ ಮಾಡು" 'ತಾಯಿಯಂತೆ ಮಗಳು ನೂಲಿನಂತೆ ಸೀರೆ" ಎಂಬ ನಾಣ್ಣುಡಿಗಳಂತೆ ನಿನ್ನ ಸಂಘಪರಿವಾರ ಹೇಗಿರುತ್ತದೆಯೋ ಅದೇ ರೀತಿ ನಿನ್ನ ಗುಣ ಬೆಳೆಯುತ್ತದೆ.

ಲಿಂಗ ಸಂಗದಲ್ಲಿ ಹುಟ್ಟಿ ಸಾಧು ಸಜ್ಜನರ ಸಂಗದಲ್ಲಿ ಬೆಳೆದರೆ ಅವರಂತೆಯೇ ನಾವು ಆಗುತ್ತೇವೆ. ಆಗ ಭೇದ ಭಾವವಡಗಿ ನಿರ್ಬಯಲಾಗುತ್ತದೆ. ನಾನು ಸಣ್ಣತನಕ್ಕೆ ಬಲಿಯಾಗದೆ ಅನಂತ ಸುಖವನ್ನು ಉಣ್ಣಬಹುದೆಂಬುದೇ ಈ ವಚನದ ಸಾರಾಂಶ.

## ಅಕ್ಕಮಹಾದೇವಿ ವಚನಗಳು

ಶರಣರಾದವರು ಮಾಂಸ ತಿನ್ನುವರೊಡನೆ ಮಾತನಾಡಿದರೆ ಪಾಪ ಬರುವುದು ಎನ್ನುವ ಹಿನ್ನೆಲೆಯಲ್ಲಿ ಅಕ್ಕನವರು ಈ ಮಾತನ್ನು ಹೇಳಿದ್ದಾರೆ. ಆದರೆ ಈ ಮಾತು ಪ್ರಸ್ತುತ ಸಂದರ್ಭಕ್ಕೆ ಸೂಕ್ತವೇ? ಎನ್ನುವುದನ್ನು ನೋಡಿದರೆ ಅದು ತಪ್ಪು ಎನ್ನುವುದು ನನ್ನ ಅಭಿಪ್ರಾಯ. ಏಕೆಂದರೆ ಪ್ರಸ್ತುತದಲ್ಲಿ ಉತ್ತಮ ಜಾತಿಯವರೇ ಮಾಂಸ ತಿನ್ನುವಂತಹ ಉದಾಹರಣೆಗಳು ಸಿಗುತ್ತವೆ. ಜೊತೆಗೆ, ತಿಂದವರೊಡನೆ ನಾವು ಮಾತನಾಡಿದರೆ ಏನೂ ಆಗುವುದಿಲ್ಲ. ಪಾಪ ಬರುವುದು ನಾವು ಮಾಡುವ ಕೃತ್ಯಗಳಿಂದಲೇ ಹೊರತು ಮಡಿ ಮೈಲಿಗೆಯಿಂದಲ್ಲ.

ಅಮೃತವನ್ನು ಉಂಡು ಬೆಳೆದ ಮಗುವಿಗೆ ವಿಷವನ್ನು ನೀಡಿದರೆ ಅದು ಬದುಕಲಾರದು. ನೆರಳಿನಲ್ಲಿಯೇ ಬೆಳೆದ ಸಸಿಗೆ ಬೆಂಕಿಯ ಸುಡು ಬಿಸಿಲು ಬಡಿದರೆ ಅದು ಬೆಳೆಯಲಾರದು. ನಿಮ್ಮ ಕರುಣೆಯ ಕಂದಗಳ ಮಾಂಸ ತಿನ್ನುವವರನ್ನು ಮಾತನಾಡಿಸಬಾರದು ಎಂದು ಅಕ್ಕ ಈ ವಚನದ ಮೂಲ ತಿಳಿಸಿದ್ದಾಳೆ.

ಅಮೃತವನುಂಬ ಶಿಶುವಿಗೆ
ವಿಷವನೂಡುವರೆ ಅಯ್ಯ
ನೆಳಲತಂಪಿನಲ್ಲಿ ಬೆಳೆದ ಸಸಿಗೆ
ಉರಿಯ ಬೇಲಿಯ ಕಟ್ಟುವರೆ ಅಯ್ಯ
ನಿಮ್ಮ ಕರುಣದ ಕಂದನೊಡನೆ
ಸೊನೆಗಾರರ ಮಾತನಾಡಿಸುವರೆ ಅಯ್ಯ?[೩೯]

ಅಸನದಿಂದ ಕುದಿದು
ವೆಸನದಿಂದ ಬೆಂದು
ಅತಿ ಆಸೆಯಿಂದ ಬಳಲಿ
ವಿಷಯಕ್ಕೆ ಹರೆವ ಜೀವಿಗಳು
ನಿಮ್ಮನರೆಯರು
ಕಾಲಕಲ್ಪಿತ ಪ್ರಳಯ ಜೀವಿಗಳೆಲ್ಲ

ನಿಮ್ಮನೆತ್ತ ಬಲ್ಲರಯ್ಯ
ಚೆನ್ನಮಲ್ಲಿಕಾರ್ಜುನ?[೪೦]

**ಅಡಿಟಿಪ್ಪಣಿಗಳು**

೧. ಶಿವಣ್ಣ ಎಸ್.(ಸಂ), **ಹೊಸ ವಚನಗಳು**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೮, ಪು.೧

೨. ಮುಗಳಿ ರಂ.ಶ್ರೀ., **ಕನ್ನಡ ಸಾಹಿತ್ಯ ಚರಿತ್ರೆ**, ಪು.೧೪೬

೩. ಅದೇ, ಪು.೧೫೦

೪. ಅದೇ, ಪು.೧೫೪

೫. ಅದೇ, ಪು.೧೫೫

೬. ಶಿವಣ್ಣ ಎಸ್.(ಸಂ), **ಹೊಸ ವಚನಗಳು**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೮, ಪು.X

೭. ಅದೇ, ಪು.XI

೮. ಅದೇ, ಪು.XI

೯. ಅದೇ, ಪು.XI

೧೦. ಅದೇ, ಪು.XII

೧೧. ಅದೇ, ಪು.XII

೧೨. ಅದೇ, ಪು.೨

೧೩. ಅದೇ, ಪು.೪

೧೪. ಅದೇ, ಪು.೪

೧೫. ಅದೇ, ಪು.೫

೧೬. ಅದೇ, ಪು.೫

೧೭. ಅದೇ, ಪು.೮

೧೮. ಅದೇ, ಪು.೯

೧೯. ಅದೇ, ಪು.೯

೨೦. ಅದೇ, ಪು.೧೦

೨೧. ಅದೇ, ಪು.೧೧

೨೨. ಅದೇ, ಪು.೧೨, ೧೩

೨೩. ಅದೇ, ಪು.೧೪

೨೪. ಅದೇ, ಪು.೧೮

೨೫. ಅದೇ, ಪು.೧೯

೨೬. ಅದೇ, ಪು.೨೦

೨೭. ಅದೇ, ಪು.೨೦

೨೮. ಅದೇ, ಪು.೨೧

೨೯. ಅದೇ, ಪು.೨೧

೩೦. ಅದೇ, ಪು.೨೨

೩೧. ಅದೇ, ಪು.೨೮

೩೨. ಅದೇ, ಪು.೩೧

೩೩. ಅದೇ, ಪು.೩೪

೩೪. ಅದೇ, ಪು.೩೯

೩೫. ಅದೇ, ಪು.೩೯

೩೬. ಅದೇ, ಪು.೪೩

೩೭. ಅದೇ, ಪು.೪೫

೩೮. ಅದೇ, ಪು.೫೪

೩೯. ಅದೇ, ಪು. ೫೮

೪೦. ಅದೇ, ಪು. ೫೮

೮

# ನೀಲಮ್ಮನ ವಚನಗಳು

ನೀಲಮ್ಮ ಬಸವಣ್ಣನ ಧರ್ಮಪತ್ನಿಯರಲ್ಲಿ ಒಬ್ಬಳು ಎಂಬುದು ಈಗಾಗಲೇ ನಿರ್ಧರಿತವಾಗಿರುವ ವಿಷಯ. ಆಚಾರಕ್ಕೆ ಗಂಗಮ್ಮನಾದರೆ ವಿಚಾರಕ್ಕೆ ನೀಲಮ್ಮ ಬಸವಣ್ಣನಿಗೆ ಬಸವನ ಅನುಭವದ ವಿವರ ಕಂಡು ವಿಚಾರ ಪತ್ನಿಯಾನಾದೆನಯ್ಯ ಸಂಗಯ್ಯ' ಎಂದು ಅವಳೇ ಹೇಳಿಕೊಂಡಿದ್ದಾಳೆ.

ಈವರೆಗೆ ನೀಲಮ್ಮನವರ ಕೇವಲ ೧೨೬ ವಚನಗಳು ಲಭ್ಯವಾಗಿವೆ. ಆದರೆ ಈಗ ಇದರಲ್ಲಿ ಒಟ್ಟು ೨೮೮ ವಚನಗಳಿವೆ. ಡಾ.ಸಾ.ಶಿ.ಮರುಳಯ್ಯ ಹಾಗೂ ಶ್ರೀ.ಎಸ್.ಶಿವಣ್ಣನವರು ತಿಪಟೂರು ತಾಲ್ಲೂಕು ಹೊನ್ನಹಳ್ಳಿ ಕರಿಸಿದ್ದೇಶ್ವರ ಮಠದ ಹಸ್ತಪ್ರತಿಗಳ ಶೋಧ ನಡೆಸಿದಾಗ ಒಂದು ಓಲೆ ಕಟ್ಟಿನಲ್ಲಿ ಕಂಡುಬಂದ ನೀಲಮ್ಮನವರ ೨೮೮ ವಚನಗಲನ್ನು ಶಿವಣ್ಣನವರು ಸಂಪಾದಿಸಿ ಇಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಹಲವಾರು ಅಪ್ರಕಟಿತ ವಚನಗಳು ಸೇರಿವೆ.

ಇವರ ವಚನಗಳಲ್ಲಿ ಎದ್ದು ಕಾಣುವ ಅಂಶಗಳು ಎರಡು. ಒಂದು ಅಣ್ಣನ ಬಗೆಗಿದ್ದ ಅಮಿತ ಪ್ರೇಮ, ಎರಡು ಸಂಗನ ಬಗೆಗಿದ್ದ. ಅಮೇಯ ಭಕ್ತಿ! ಒಂದು ಆಕೆಯ ವಚನ ಧಾತು ಮತ್ತೊಂದು ಅವಳ ವಚನ ದ್ರವ್ಯ. ಸ್ಥೂಲ ದೃಷ್ಟಿಗೆ ಭಿನ್ನವಾಗಿ ಕಂಡರೂ ಇವೆರಡರ ಅಂತಿಮ ಗುರಿ ಒಂದೇ. ಅದು ಶಿವನ ಸಾಧನೆ ಅಥವಾ ಶೂನ್ಯದ ಸಿದ್ಧಿ. ವೀರಶೈವ ಪರವಾದ ಶೀವದ್ವೈತ ದರ್ಶನದಲ್ಲಿ ಶೂನ್ಯವೆಂದರೆ "ಸೊನ್ನೆ". ಅಲ್ಲಿ ಸೃಷ್ಟಿ ಏನೂ ಇಲ್ಲ. ಅದರೂ ಎಲ್ಲಾದೂ ಆಗಿರುವುದು ಎಲ್ಲರರಲ್ಲೂ ತಾನಿದ್ದು, ಯಾವುದೂ ತಾನಾಗದಿರುವುದು ಶೂನ್ಯ! ಅದೇ ಸಕಲ ನಿಃಕಲ ಸ್ವರೂಪ.

ಲೌಕಿಕ ಪಾರಮಾರ್ಥಗಳೆರಡರ ದೃಷ್ಟಿಯಲ್ಲೂ ಬಸವಣ್ಣ ಮತ್ತು ನೀಲವ್ವೆಯವರು ಅಪರೂಪದ ದಾಂಪತ್ಯ, ಆದರ್ಶ ದಾಂಪತ್ಯ, ಅವರ ಅನ್ಯೋನ್ಯ ಅನುರಾಗದ ಬಾಳುವೆ ಶಿವಯೋಗದ ಸಾಧನರಂಗ, ಆವರ ಪ್ರೇಮವೇ ಪೂಜೆ, ಅಕ್ಕರದ ನೀತಿಗಳೇ ಮಂತ್ರ.

ಶಿವಶರಣರ ವಚನಗಳು ಸುಂದರ ಭಾವಗೀತೆಗಳು, ರಮಣೀಯ ಕಾವ್ಯಕಲಾ ಕುಸುಮಗಳು, ಆವುಗಳಲ್ಲಿ ಭಾವದ ಕಾವ್ಯ ಇದೆ. ನಾದದ ಯೋಗ ಇದೆ. ಭಾವಗೀತದಂತೆ ಭಾವುಕತೆ, ಗೇಯತೆ, ಸೃಷ್ಟಿಪ್ರತೆ ಸ್ವಯಂ ಪೂರ್ಣತೆ ಹಾಗೂ ಸಂಭಾಗತೆ ಮೊದಲಾದ ಲಕ್ಷಣಗಳನ್ನು ಮೈಗೂಡಿಸಿಕೊಂಡು ಮಾಡಿದವುಗಳು. ಅವು ಕ್ಷಣವೊಂದರ ಸ್ಮಾರಕಗಳೂ ಹೌದು. ಚಿರಂತನ ಚಿಂತನದ ಚೈತ್ಯಾಲಯಗಳು

ಹೌದು. ಈ ಬಗೆಯ ಧರ್ಮ ಕಾವ್ಯಗಳೆರಡನ್ನೂ ಗರ್ಭೀಕರಿಸಿಕೊಂಡಿರುವ ಭಾವಗೀತಾತ್ಮಕತೆ ಯಥೇಚ್ಛವಾಗಿ ದೊರೆಯುತ್ತದೆ ನೀಲಮ್ಮನ ವಚನಗಳಲ್ಲಿ.

ಇಲ್ಲಿಯ ಭಾಷೆ ಸಾಮಾನ್ಯವಾಗಿ ಅನುಭವದ ತೊಡುಗೆ ಆಗುತ್ತೆ. ಸಮರ್ಥ ಸಂವಹನ ಮಾಧ್ಯಮವಾಗುತ್ತೆ, ಭಾರವಾಹಕವಾಗುತ್ತೆ ಆದರೆ ಅನುಭಾವ ಸಂದರ್ಭದಲ್ಲಿ ಅನುಭವವೇ ತಾನಾಗುತ್ತೆ! ಅಂದರೆ ಕಾವ್ಯಾಭಿವ್ಯಕ್ತಿ ವೇಳೆಯಲ್ಲಿ ಅನುಭವವನ್ನು ಅನುಸರಿಸುವ ಸಾಧನವಾದರೆ, ಆಧ್ಯಾತ್ಮ ವಲಯದಲ್ಲಿ ಅನುಭಾವದ ಸಮಗ್ರ ಅಭಿವ್ಯಕ್ತರೂಪವೇ ತಾನಾಗುತ್ತೆ. ಅಲ್ಲಿ ಭಾಷೆ ಅನುಭವವನ್ನು ರೂಪಿಸಿಕೊಟ್ಟರೆ ಇಲ್ಲಿ ಅನುಭವವೇ ಭಾಷೆಯನ್ನು ನಿರ್ಮಿಸುತ್ತದೆ. ಇದಕ್ಕೆ ಮಾತ್ರ ವಚನ ಸಾಹಿತ್ಯ ಎನ್ನುತ್ತೇವೆ.

ನೀಲಮ್ಮ ಶ್ರೇಷ್ಠ ಕಲಾವಿದೆ. ಅಷ್ಟೇ ಮಟ್ಟದ ವಿಚಾರವಾದಿನಿ. ಅವಳು ಚಿತ್ರ, ಶಿಲ್ಪ, ನೃತ್ಯ, ಸಂಗೀತ, ಸಾಹಿತ್ಯದ ಲಲಿತಕಲೆಗಳಲ್ಲಿ ನಿಷ್ಣಾತೆಯಾಗಿದ್ದಾಳೆಂದು ತಿಳಿದುಬರುತ್ತದೆ. "ನಿಜಭಕ್ತೆ ನೀಲಾಂಬಿಕೆ" ಎಂಬ ಬಿರುದು ಇವರಿಗುಂಟು.

ಮಡದಿ ಎನಲಾಗದು ಬಸವರಿಗೆ ಎನ್ನನು
ಪುರುಷನೆನಲಾಗದು ಬಸವರಿಗೆ ಎನ್ನನು
ಉಭಯದ ಕುಳಹರಿದು ಬಸವಂಗೆ ಶಿಶುವಾನಾದೆನು
ಬಸವನೆನ್ನ ಶಿಶುವಾದ
ಪ್ರಮಥರು ಪುರಾತರು ಸಾಕ್ಷಿಯಾಗಿ
ಸಂಗಯ್ಯ ನಿಕ್ಕದ ದಿಬ್ಬದ ವೀರದೆ ಬಸವನೊಳಗಾನಡಗಿದೆ.[೧]

ಇಲ್ಲಿ ಬಾಹ್ಯಲೋಕಕ್ಕೆ ಮಾತ್ರ ಬಸವಣ್ಣ ಮತ್ತು ನೀಲಮ್ಮ ಗಂಡ ಹೆಂಡತಿ. ಆದರೆ ಒಳಗೆ ಅವರಿಬ್ಬರು ಮಕ್ಕಳಂತೆ ಒಬ್ಬರಲ್ಲಿ ಒಬ್ಬರು ಐಕ್ಯರಾಗಿದ್ದಾರೆ.

ಬಸವಣ್ಣನವರು ನನ್ನನ್ನು ಸಲುಗೆಯಿಂದ ಮಡದಿ ಎಂದು ಕರೆಯಲು ಆಗುತ್ತಿಲ್ಲ. ಹೋಗಲಿ ನನ್ನನ್ನು ಗಂಡು ಎಂದು ಕರೆಯಲಾಗದು ಈ ರೀತಿಯ ಉಭಯ ಸಂಕಟವ ಅನುಭವಿಸುವ ನಾನು ಮತ್ತು ಬಸವಣ್ಣ ಅಂತರಾತ್ಮದಲ್ಲಿ ಶಿಶುಗಳಾಗಿದ್ದೇವೆ. ಆಕೆಯಲ್ಲಿ ಆತ ಆತನಲ್ಲಿ ಆಕೆ ಲಿಂಗ ಸಂಗಮದ ರೂಪದಲ್ಲಿ ಒಂದಾಗಿದ್ದಾರೆ.

**ಸಾರಾಂಶ**

ಭಗವಂತನ ಕೃಪೆಗೆ ಪಾತ್ರರಾಗಲು ಜಪ, ತಪ, ಮಂತ್ರಗಳು ಬೇಕಾಗಿಲ್ಲ. ಮಡಿ, ಮೈಲಿಗೆಯ ನಿಯಮ ಬೇಕಾಗಿಲ್ಲ. ನೀರಲ್ಲಿ ಮುಳುಗಿ ದೇವರೊಡನೆ ಮಂತ್ರ ಹೇಳುವುದರ ಮೂಲಕ ದೇವರು ನಮಗೆ ಹತ್ತಿರವಾಗುವುದಿಲ್ಲ. ಮೈ ಮೇಲೆ ಗಂಧ ವಿಭೂತಿಯ ಬಳಿದರೆ ಮಾತ್ರ ದೇವನೊಲಿಸಲು ಸಾಧ್ಯವಿಲ್ಲ.

ದೇವರಿಗೆ ಇಂತದ್ದೇ ಎಂಬ ನಿರ್ಧಿಷ್ಟವಾದ ರೂಪವಿಲ್ಲ. ಆ ಮೂರ್ತಿಯ ಕಲ್ಪನೆಯ ಗೊಂಬೆ ಮಾಡಿದವರೇ ನಾವು ಅದನ್ನು ಕಳೆದು ನಿರಾಕಾರ ಮೂರ್ತಿಯನ್ನು ಭಜಿಸಿದರು. ಕೂಡ, ದೇವರನ್ನು ಒಲಿಸಿಕೊಳ್ಳಬಹುದು ಎಂಬುದನ್ನು ನೀಲಮ್ಮ ಈ ವಚನದಲ್ಲಿ ತಿಳಿಸಿದ್ದಾಳೆ.

ಮಾತಿಲ್ಲವೆನಗೆ ಆತ ನುಡಿಯಲಿಲ್ಲವೆನೆಗೆ
ನೇಮವನಳಿದು ಸೀಮೆಯಕಳದು
ಉಭಯ ತನುನಷ್ಟವಾಗಿ ಬಣ್ಣ ಭ್ರಮೆಯಳಿದು
ಮೂರ್ತಿಯ ಕುರುಹ ನಷ್ಟವ ಮಾಡಿ
ಸಂಗಯ್ಯನಲ್ಲಿ ಬಸವ ಭಾವವಿಲ್ಲದ ಬಯಲಾದನು.[೨]

ಮುಖವಿಲ್ಲದ ಕನ್ನಡಿಯ ನೋಡಲು
ಆ ಕನ್ನಡಿಯ ರೂಪಿನೊಳಗೆ ಬಸವಯ್ಯನ ರೂಪು ಕಾಣಬಂದಿತ್ತು
ಆ ರೂಪವನರೆದು ಪರಿಣಾಮ ಕಂಡು ಬದುಕಿದೆನಯ್ಯ
ಪ್ರಸನ್ನ ವದನಳಾಗಿ ಪ್ರಭಾನ ಪರಿಣಾಮಿಯಾದೆನು
ಗಮನದ ಸಂಗ ನಿಸ್ಸಂಗವಾಗಿ ಎನಗೆ
ಇಹ ಪರವಿಲ್ಲವಯ್ಯ ಸಂಗಯ್ಯ[೩]

ನನ್ನ ಮನದ ತುಂಬಾ ನೀವೇ ತುಂಬಿರುವಾಗ ನನಗಿನ್ನಾವ ರೂಪ ಕಾಣದು ಎಂಬಂತೆ ನಾನು ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಳ್ಳಲು ಹೋದರೆ ನನ್ನ ಆರಾಧ್ಯ ದೈವನಾದ ಬಸವಯ್ಯ ರೂಪವೇ ಕಂಡಿತು. ಆ ಮಹಾತ್ಮನ ದಿವ್ಯದರ್ಶನವನ್ನು ಪಡೆದು. ಅವರ ಬೋಧನೆಯನ್ನರಿತು ಅದರ ಸಾರವನ್ನು ನಾನು ತಿಳಿದೆ. ಅವರ ಪ್ರಭಾವದಿಂದ ಪ್ರಬಾವಿತಳಾಗಿ ಅವರ ಗಮನವನ್ನು ಸೆಳೆದೆ. ಆಗ ನನಗೆ ಜ್ಞಾನೋದಯಾಗಿ ಪಾರಮಾರ್ಥಿಕದ ಕಡೆ ಎನ್ನ ಗಮನ ಆಯಿತು ನೋಡ ಸಂಗಯ್ಯ ಎಂದು ಈ ವಚನದ ಸಾರಾಂಶ.

### ಸಾರಾಂಶ

ಸಂಸಾರವೆಂಬ ಕೂಟದಲ್ಲಿ ಭಗವಂತನ ಸ್ಮರಿಸದೆ ಅಡವಿಯಲ್ಲಿ ಕಂಗೆಟ್ಟ ಪಶುವಿನಂತೆ ನಾನು ಪದೇ ಪದೇ ದಾರಿಯ ಹುಡುಕಾಟಕ್ಕಾಗಿ ಒಯ್ದಾಡಿದೆನು. ಕ್ಷಣಿಕ ಸುಖವು ನನ್ನ ಜ್ಞಾನದ ಕಣ್ಣನ್ನು ಮುಚ್ಚಿ ಮುಕ್ತಿಯ ದಾರಿ ಕಾಣದಂತಾಗಿದೆ. ನಾನು ನನ್ನದು ನನ್ನ ಸಂಸಾರವೆಂಬ ದುಃಖದ ಕೋಟೆಯನ್ನು ಕಟ್ಟಿಕೊಂಡು ಅದರಲ್ಲಿಯೇ ಬಿದ್ದು ಕಷ್ಟವನ್ನು ಅನುಭವಿಸುತ್ತಿದ್ದೇನೆ. ಆ ಜ್ಞಾನಸಿಂಧುವಾದ ಶರಣ ಚೆನ್ನಣ್ಣನ ಕಂಡು ನಾನು ತೃಪ್ತನಾದೆ. ಶಿವ ಶಿವಾ ಎಂಬ ಮಂತ್ರವು ನನ್ನ ಕಿವಿಗೆ ಬಿದ್ದು ನನ್ನ ಜೀವನದ

ಬಳಲಿಕೆ ದುಃ ಎಲ್ಲವನ್ನು ಕಳೆದು ಸಂಗಯ್ಯನಲ್ಲಿ ಶರಣಾಗಿ ನಮೋ ನಮೋ ಎನ್ನುತ್ತ ಅವನಲ್ಲಿ ಐಕ್ಯನಾಗುವೆ ಎಂದು ಹೇಳುತ್ತಾರೆ.

ಅಡವಿಯಲ್ಲಿ ಕಣ್ಣುಗೆಟ್ಟ ಪಶುವಿನಂತೆ
ನಾನು ಪ್ರಳಾಪಿಸುತಿರ್ದೆನಯ್ಯ
ಕಡು ದುಃಖದಿಂದ ಮರುಗಲು ಶರಣ ಚೆನ್ನಣ್ಣನರೆದು
ಶಿವ ಶಿವಾಯೆಂಬ ಮಂತ್ರವನರುಹಿ
ಅಳಲುವ ಬಳಲಿಕೆಯ ಕಳರನಯ್ಯ
ಸಂಗಯ್ಯನಲ್ಲಿ ಚೆನ್ನಬಸವಣ್ಣಂಗೆ ನಮೋ ನಮೋ ಎನ್ನುತ್ತಿರೇನು"

ಕಲ್ಯಾಣವಿಲ್ಲ ಕೈಲಾಸವಿಲ್ಲ
ಕಲ್ಯಾಣ ವಿಲ್ಲದ ಕಾರಣ ಕೈಲಾಸವಿಲ್ಲವೆನಗೆ
ಅಕಲ್ಯಾಣ ಕೈಲಾಸವಾಯಿತ್ತು
ಆ ಕಲ್ಯಾಣವಳೀದು ಕೈಲಾಸವಾದ ಬಳಿಕ
ಬಸವನ ಮೂರ್ತಿಯಿಲ್ಲ
ಬಸವನ ಮೂರ್ತಿಯವರೆಯದ ಕಾರಣ
ಕೈಲಾಸವಿಲ್ಲ ಕಲ್ಯಾಣವಿಲ್ಲವಯ್ಯ ಸಂಗಯ್ಯ"

ಇಡೀ ವಿಶ್ವವೇ ಶಿವನ ಮಂದಿರ ಈ ಬಾಹ್ಯ ಪ್ರಪಂಚದಲ್ಲಿನ ಎಲ್ಲಾ ವಸ್ತುಗಳಲ್ಲಿ ಶಿವನಿದ್ದಾನೆ. ಅವನ ಇರುವಿಕೆಗೋಸ್ಕರ ಒಂದು ಸ್ಥಳವನ್ನು ಗುರುತಿಸಿಕೊಂಡು ಅಲ್ಲಿ ಆತನ ಮೂರ್ತಿಯನ್ನು ನೆಲೆಗೊಳಿಸಿಕೊಂಡಿದ್ದೇವೆ. ಇಲ್ಲಿ ಬಸವಣ್ಣನ ಹೆಂಡತಿಯಾಗಿ ನೀಲಮ್ಮ ಶಿವನ ಪರಮ ಭಕ್ತಳಾಗಿದ್ದಾಳೆ. ಆಕೆ ಕಲ್ಯಾಣ ಭೇರೆಯಲ್ಲ, ಕೈಲಾಸ ಬೇರೆಯಲ್ಲ. ಕಲ್ಯಾಣ ಇಲ್ಲ ಎಂದ ಮೇಲೆ ಕೈಲಾಸವಿಲ್ಲ ಏಕೆಂದರೆ ಆ ಕಲ್ಯಾಣ ನಗರಿಯೇ ಕೈಲಾಸವಾಗಿದೆ. ಕಲ್ಯಾಣದಲ್ಲಿ ಬಸವನ ಮೂರ್ತಿ ಇಲ್ಲ. ಏಕೆಂದರೆ ಅವನು ನಿರಾಕಾರಿ ಆಗಾಗಿ ಅವರು ಎಲ್ಲರ ಮನೆ ಮನಗಳಲ್ಲಿರುವನು ಅಂದರೆ ಕಲ್ಯಾಣವೇ ಕೈಲಾಸವಾಗಿ ಮಾರ್ಪಟ್ಟಿದೆ ಎಂಬುದೇ ಇದರ ಸಾರ.

ಸಾರಾಂಶ

"ಕುಲ ಕುಲವೆಂದು ಹೊಡೆದಾಡದಿರಿ" ಎಂದು ದಾಸರು ಹಿಂದೆ ಹೇಳಿದ್ದಾರೆ. ಅಂದರೆ ನಮ್ಮ ನಡೆ ವರ್ತನೆ ನಮ್ಮ ಜಾತಿಯನ್ನು ತಿಳಿಸಿಕೊಡುತ್ತವೆ. ಇಲ್ಲಿ ನೀಲಮ್ಮ ತನ್ನ ವಂಶ ಇಂತಹುದು ಎಂಬುದನ್ನು ತಿಳಿಸಿ ಹೇಳುತ್ತಾಳೆ. ನಾನು ಎಂತಹ ಅಚಲ ಭಕ್ತಿವುಳ್ಳವಳು ಎಂಬುದಕ್ಕೆ ಹೆಣ್ಣಿನ ಮೋಹಕ್ಕೆ ಒಳಗಾಗದ ಅಲ್ಲಮಪ್ರಭುವಿನ ವಂಶದವಳು ಎಂದು ಹೇಳುತ್ತಾಳೆ. ಶರಣರಿಗೆ ಶತೃಗಳೇ ಇಲ್ಲ. ಅಂದರೆ

ಎಲ್ಲರನ್ನು ಪ್ರೀತಿಸುವಂತವರು ಶರಣರು. ಅಂತಹ ಅಜಾತ ಶರಣರ ವಂಶ ನನ್ನದು ಎಂದು ಹೇಳುತ್ತಾಳೆ. ಅಪ್ರತಿಮ ಶರಣರ ವಂಶದವಳು ನಾನು ಎನ್ನುತ್ತಾಳೆ. ವೇದ, ಉಪನಿಷತ್ತು, ಆಗಮಶಾಸ್ತ್ರವನ್ನು ಸಾಮಾನ್ಯವಾಗಿ ಶರಣರು ಅರಿತಿರುತ್ತಾರೆ. ಅಂತಹ ಆಗಮ ಶಾಸ್ತ್ರಗಳನ್ನು ಅರಿತ ಜನ ವಂಶ ನನ್ನದು ಎಂದು ಹೇಳುತ್ತಾರೆ.

ನಾನು ಯಾವ ದೇಶದಲ್ಲಿದ್ದರೇನು ಯಾವ ಸ್ಥಳದಲ್ಲಿದ್ದರೇನು ಅದೆಲ್ಲಾವು ಶಿವನ ಸ್ಥಳ ಆಗಾಗಿ ಅವನಲ್ಲಿ ನಾನು ಒಂದಾಗಿರುವುದರಿಂದ ನನಗೆ ಯಾವ ಜಾತಿ, ಮತ, ಸ್ಥಳದ ಹಂಗಿಲ್ಲ ಎಂದು ಹೇಳಿಕೊಳ್ಳುತ್ತಾಳೆ.

ಅಲ್ಲಮದ ವಂಶದವಳು ನಾನು
ಅಜಾತ ಶರಣರ ವಂಶದವಳು ನಾನು
ಅಪ್ರತಿಮ ಶರಣರ ವಂಶದವಳು ನಾನು
ಆಗಮಾನಾದಿಗಳ ವಂಶದವಳು ನಾನು
ನಾನು ಆವ ದೇಸದಲ್ಲಿದ್ದಡೇನು
ನಾನು ಆವಸ್ಥಾನದಲ್ಲಿದ್ದಡೇನು
ಸಂಗಯ್ಯನಲ್ಲಿ ಬಸವ ಸ್ವಯಂಲಿಂಗಿಯಾದೆನು.[೬]

ಯುಗವಿಲ್ಲಾ ಜುಗವಿಲ್ಲಾ ಕಾಲವಿಲ್ಲ ಕಲ್ಪಿತವಿಲ್ಲ
ಅರುಹಿಲ್ಲ ಮರುಹಿಲ್ಲ ಆಚಾರವಿಲ್ಲ ವಿಚಾರವಿಲ್ಲ
ಸಂಗ ನಿಸ್ಸಂಗವಿಲ್ಲವಯ್ಯ ಸಂಗಯ್ಯ ನಿಮ್ಮ ಧರ್ಮದಿಂದ[೭]

ದೇವರನ್ನು ಆರಾಧಿಸಿ ಅವರ ಭಕ್ತರಾಗಲು ಈಗೇ ಮಾಡಬೇಕೆಂಬ ಆಚಾರ, ವಿಚಾರ, ನೀತಿ ನಿಯಮವಿಲ್ಲ. ಮಾಂಸವನ್ನು ತಿನ್ನುವ ಕಣ್ಣಪ್ಪ ಮಾಂಸವನ್ನೇ ಪುಷ್ಪವೆಂದು ತಿಳಿದು ಲಿಂಗಕ್ಕೆ ಅರ್ಪಿಸಿದ ಅಂದರೆ ಅವನ ನಿರ್ಮಲ ನಿಷ್ಕಲ್ಮಶ ಭಕ್ತಿಗೆ ಮಾಂಸವೇ ಪುಷ್ಪದಂತೆ ಕಂಡಿತು. ಅದನ್ನೇ ಅರ್ಪಿಸಿ ಶಿವಮೆಚ್ಚಿದ ಕಣ್ಣಪ್ಪ ನೆನೆಸಿದ.

ಅದಕ್ಕಾಗಿ ನೀಲಮ್ಮ ಈ ಮೇಲಿನ ವಚನದಲ್ಲಿ ಯುಗವಿಲ್ಲ ವಂಶವಿಲ್ಲ ಇಂತಿಷ್ಟೇ ಕಾಲದಲ್ಲಿ ತ್ಯಜಿಸಬೇಕೆಂಬ ನಿಯಮವಿಲ್ಲ. ಎನ್ನುವ ತಿಳುವಳಿಕೆಯಿಲ್ಲದ ಭಕ್ತನೂ ಕೂಡ ಶಿವಭಕ್ತನಾಗಬಹುದು. ಅದೇ ರೀತಿ ಯಾವ ಮರೆವೂ ಇಲ್ಲ ಎನ್ನುತ್ತಾನೆ. ಸಂಗಯ್ಯ ನಿಮ್ಮ ಧರ್ಮಕ್ಕೆ ನಾನು ಹೊಂದಿಕೊಂಡ ಮೇಲೆ ಅಲ್ಲಿನ ಆಚರಣೆಗಳನ್ನು ಕಂಡು ಮಂತ್ರಮುಗ್ಧೆಯಾದೆನಯ್ಯ. ಅಲ್ಲಿ ಜಾತಿ, ಮತ, ಮೇಲು, ಕೀಳು, ಆಚಾರ, ವಿಚಾರ, ಮಡಿ, ಮೈಲಿಗೆ, ಎಂಬ ವಿಚಾರವಿಲ್ಲದೆ ಶಿವನ ಅನಂತ ಭಕ್ತರಾದರೆ ಸಾಕು ಎಂದು ಹೇಳುತ್ತಾಳೆ.

**ಸಾರಾಂಶ**

ಕಳ್ಳರೊಂದಿಗೆ ಗೆಳೆತನ ಮಾಡಿದರೆ ಕಳ್ಳರಾಗುತ್ತೇವೆ. ಶರಣರ ಸಹವಾಸ ಮಾಡಿದರೆ ಶರಣರಾಗುತ್ತೇವೆ ಎಂಬಂತೆ. ಶರಣರ ಜೊತೆ ಆಡಿದರೆ ಅವರ ಗುಣಗಳೇ ನಮ್ಮಲ್ಲಿ ಬೆಳೆಯುತ್ತವೆ. ಅವು ನಮ್ಮನ್ನು ಶರಣಾರಾಗುವಂತೆ ಪ್ರೇರೇಪಿಸುತ್ತದೆ.

ಇಲ್ಲಿ ನೀಲಮ್ಮ ತನ್ನ ಶರಣ ಸಂಗ ಹೇಗಿತ್ತು ಎಂಬುದನ್ನು ತಿಳಿಸಿ ಹೇಳುತ್ತಾಳೆ. ಅವರ ಜೊತೆಯಲ್ಲಿರುವಾಗ ತುಂಬಾ ಹಿತಕಾರಿಗಳಾಗಿದ್ದರು. ಶರಣರು ನನಗೆ ಬೆಳಕಾದರು. ನನಗೆ ನಿಸ್ಸಂಗದ ಫಲವನ್ನು ತೋರಿಸಿ ಕೊಟ್ಟವರು ಈ ಶರಣರು. ಅವರು ಅನುಸರಿಸುವ ದಾರಿಯನ್ನು ನಾನು ಅನುಸರಿಸಲೆಂದು ನೋಡ ಹೋದರೆ ಅವರು ನಡೆಯುವ ದಾರಿ, ಅವರ ಗುಣಗಳೇ ನನ್ನ ಮೈಗೂಡಿದವು. ಅವರಂತೆಯೇ ನಾನು ಆಗಬೇಕೆಂಬ ಆಸೆ ನನ್ನಲ್ಲಿ ಮೂಡಿ ನಾನೊಬ್ಬ ಶರಣಳಾಗುವಂತೆ ಮಾಡಿತು ಎಂಬುದೇ ಈ ವಚನದ ಸಾರಾಂಶ.

ಎನಗೆ ಹಿತಕಾರಿಗಳಾಗಿ ಇದ್ದವರೇ ಶರಣರು
ಎನಗೆ ಪ್ರಭೆದೋರಿ ಇದ್ದವರೀ ಶರಣರು
ಎನಗೆ ಸಂಗ ನಿಸ್ಸಂಗ ಕೊಟ್ಟವರೀ ಶರಣರು
ಆ ಶರಣ ಪಥವ ನೋಡ ಹೋದರೆ
ಆನು ನೋಡದ ಒಲವು ಒಲವೆ ಆಯಿತಯ್ಯ ಸಂಗಯ್ಯ ಸಂಗಯ್ಯ[೮]

ಎನಗೆ ಲಿಂಗವು ನೀವೆ ಎನಗೆ ಸಂಗವು ನೀವೆ
ಎನಗೆ ಪ್ರಾಣವು ನೀವೆ ಎನಗೆ ಪ್ರಸಾದವು ನೀವೆ
ಪ್ರಭೆಯ ಮೂರುತಿಯು ನೀವೆ ಸಂಗಯ್ಯನು ನೀವೆ ಬಸವಯ್ಯ[೯]

ನನಗೆ ಎಲ್ಲವೂ ನೀನೆ, ನಿನ್ನನ್ನು ಬಿಟ್ಟರೆ ನನಗಾವ ಗತಿಯಿಲ್ಲ. ನಾನು ಏಕಾಂಗಿಯಾದರೂ ನಿನೇಗತಿ ನಾನು ಸಂಗಮಾಡಿದರೂ ಕೂಡ ನೀನೇ ಗತಿ. ನನ್ನ ಉಸಿರ ಉಸಿರಲ್ಲಿ ನೀನೇ ಬೆರತಿರುವಾಗ ಎನಗೆ ಪ್ರಾಣದ ಭೀತಿಯಿಲ್ಲ. ಆಗಾಗಿ ನನ್ನ ಪ್ರಾಣವೂ ನೀನೆ. ಎನಗೆ ಪ್ರಸಾದವೂ ನೀನೆ ನಿನ್ನ ನಾಮ ಸ್ಮರಣೆ ಮಾಡಿದರೆ ಸಾಕು ನನ್ನ ಒಡಲು ತುಂಬುತ್ತದೆ.

ಇಡೀ ವಿಶ್ವವೆಲ್ಲ ಕ್ಷಣಿಕ ಸುಖದತ್ತ ಮೋಹಗೊಂಡು ಅಜ್ಞಾನದ ಅಂಧಕಾರದಲ್ಲಿ ಮುಳುಗುತ್ತಿದೆ. ಅಂತವರಗೆ ನಮ್ಮ ದರ್ಶನದ ಬೆಳಕು ಮೂಡಿ ವಿಶ್ವಕ್ಕೆಲ್ಲ ಜ್ಞಾನೋದಯವಾಯಿತು ಬಸವಯ್ಯ ಎಂದು ನೀಲಮ್ಮ ಈ ಮೇಲಿನ ವಚನದಲ್ಲಿ ತಿಳಿಸಿದ್ದಾರೆ.

ಸಾರಾಂಶ

ಬೃಹತ್ತಾದ ಈ ವಿಶ್ವವೆಂಬ ಅಡವಿಯಲ್ಲಿ ನಮ್ಮ ಜನಿಸುವಂತೆ ಮಾಡಿದಿರಿ. ಅದರಲ್ಲಿ ನಿರ್ದಿಷ್ಟವಾದ ಒಂದು ಸ್ಥಳವನ್ನು ಸೂಚಿಸಿ ಅಲ್ಲಿ ನೆಲೆಗೊಳ್ಳುವಂತೆ ಮಾಡಿದಿರಿ. ಈ ಪ್ರಪಂಚಕ್ಕೆ ನಮ್ಮ ಮನುಷ್ಯರನ್ನಾಗಿ ಸೃಷ್ಟಿಸಿದ್ದಿರಿ ಮಕ್ಕಳಿಲ್ಲದ ತಾಯಿಗೆ ಮಕ್ಕಳಾಗುವಂತೆ ಆದರೆ ಆ ಮಕ್ಕಳನ್ನೇ ಕಿತ್ತುಕೊಂಡಿರಿ. ಅಂದರೆ ಇದರ ಅರ್ಥ ಮನುಷ್ಯರಾಗಿ ಏನೋ ಜನಿಸಿದೆವು. ಆದರೆ ನಮಗೆ ಭಗವಂತನ ಬಗ್ಗೆ ಜ್ಞಾನವಿಲ್ಲದಂತೆ ಮಾಡಿ ಅವನ ಇರುವಿಕೆಯನ್ನು ಮರೆಯುವಂತೆ ಮಾಡಿದಿರಿ.

ಈ ಭೂಮಿಯ ಮೇಲೆ ಹುಟ್ಟಿದ ನಾವು ಕಷ್ಟ ಸುಖ, ಜ್ಞಾನ ಅಜ್ಞಾನಗಳನ್ನು ಅರಿಯಬೇಕಾಗುತ್ತದೆ. ಅದನ್ನು ತಿಳಿಯುವಂತೆ ಮಾಡು ಎಂದು ಬೇಡಕೊಳ್ಳುತ್ತಾಳೆ. ನಿನ್ನ ಇರುವಿಕೆಯ ರೂಪವನ್ನು ಜನರು ಮರೆತಿದ್ದಾರೆ. ನಿನ್ನ ಮಹಿಮೆಯನ್ನು ಜಗತ್ತಿಗೆ ತೋರ್ಪಡಿಸು ಎಂದು ಹೇಳುತ್ತಾಳೆ.

ಅಡವಿಯಲ್ಲಿ ಬಿಟ್ಟು ಹೋದಿರಿ
ನಟ್ಟ ನಡುವ ಗ್ರಾಮದ ಕೆಡಿಸಿ ಹೋದಿರಿ
ಹುಟ್ಟಿಲ್ಲದ ಬಂಜೆಗೆ ಮಕ್ಕಳ ಕೊಟ್ಟರಿ
ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ
ಸಂಗಯ್ಯನಲ್ಲಿ ನೀನೆಂತಪ್ಪ ಮಹಿಮನಯ್ಯ ಬಸವಾ?[೧೦]

ಎಸಳೆಗಳ ಹೊಸದು ನೋಡುವ ಯೋಗಿಗಳು
ಬಸವನ ಐಕ್ಯವ ಕಾಣದಾದರು
ರೂಪ ನಿರೂಪಿಸುವ ಯೋಗಿಗಳು
ಬಸವನ ಐಕ್ಯವ ಕಾಣದಾದರು
ಸಂಗಯ್ಯ ನಿಮ್ಮ ಬಸವನ ಐಕ್ಯವ ಬಲ್ಲಾತ ಚೆನ್ನಬಸವಣ್ಣನು[೧೧]

ನಮ್ಮ ಜೊತೆಯಲ್ಲಿ ಅಮೂಲ್ಯವಾದ ವಸ್ತುವಿದ್ದರೂ ಅದರ ಮಹತ್ವವನ್ನು ಅರಿಯದ ನಾವು ಅದನ್ನು ಸಾಮಾನ್ಯ ವಸ್ತುವಿನಂತೆ ಕಾಣುತ್ತೇವೆ. ಕಳೆದುಕೊಂಡಾಗಲೇ ವಸ್ತುವಿನ ಬೆಲೆ ಗೊತ್ತಾಗುವುದು ಎಂಬಂತೆ. ಬಸವಣ್ಣನ ಜೊತೆ ಇದ್ದವರೇ ಅವರ ಗುಣ ಮತ್ತು ಉದ್ದೇಶವನ್ನು ಅರಿಯದಾದರು ಅವರು ಮಾಡುವ ಪ್ರತಿಯೊಂದು ಕಾರ್ಯಕ್ಕೂ ಒಂದು ಉದ್ದೇಶವಿರುತ್ತಿತ್ತು. ಆದರೆ ಅದನ್ನು ತಿಳಿಯದ ಅವಿವೇಕ ಜನ ಅವರನ್ನು ಒಡೆದುಕೊಂದರು.

ಆಚಾರ ಹೇಳುವ ಜನ ಅವರ ಆಚರಣೆಗಳನ್ನು ಸಹಿಸದಾದರು. ಕ್ಷುಲಕ ಮನಸ್ಸಿರುವ ಜನರಿಗೆ ನಿಮ್ಮ ವಿಚಾರಗಳು ತಿಳಿಯದಾದವು. ನಿಮ್ಮ ಅರಿತವ ಜ್ಞಾನಿ ಎಂದರೆ ಅಣ್ಣ ಚೆನ್ನಬಸವಣ್ಣ ಮಾತ್ರ ಎಂದು ನೀಲಮ್ಮ ಹೇಳಿದ್ದಾಳೆ.

ಸಾರಾಂಶ

ಈ ಕೆಳಗಿನ ವಚನದಲ್ಲಿ ಬಸವಣ್ಣನ ಮಹತ್ವವನ್ನು ಕುರಿತು ಹೇಳಿದ್ದಾಳೆ. ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೆ ಪ್ರಪಂಚಕ್ಕೆ ಕಾಣದೆ?" ಎಂಬ ಗಾದೆ ಮಾತಿನಂತೆ ನಾವು ಏನೇ ಮಾಡಿದರೂ ಅದರ ಗುರುತು ಇದ್ದೇ ಇರುತ್ತದೆ. ನೀನು ನೋಡದಿದ್ದರು ಪ್ರಪಂಚ ನಮ್ಮನ್ನು ವೀಕ್ಷಿಸುತ್ತದೆ.

ಇಲ್ಲಿ ಬಸವಣ್ಣ ತನ್ನ ತಂದೆ ತಾಯಿಯನ್ನು ಬಿಟ್ಟು ಸಮಾಜದ ಸುಧಾರಣೆಗೋಸ್ಕರ ಕಾರ್ಯ ನಿರತ ವ್ಯಕ್ತಿಯಾಗಿದ್ದಾನೆ. ಅದಕ್ಕಾಗಿ ಅಂತಹ ವ್ಯಕ್ತಿಯನ್ನು ನಾವು ಅರ್ಥ ಮಾಡಿಕೊಳ್ಳಲಿಲ್ಲವಲ್ಲ ಎಂದು ಹೇಳಿದ್ದಾಳೆ.

ಎಲೆಗಳೇ ಇಲ್ಲದ ಮರವನ್ನು ಎಲ್ಲಿಯಾದರೂ ನೋಡಿದ್ದೇವೆಯೇ? ಅದೆಂದಿಗೂ ಸಾಧ್ಯವಿಲ್ಲ. ಎಂತಹ ಕಳ್ಳತನವೇ ಆಗಿರಲಿ ಅಲ್ಲಿ ಅಪರಾಧಿ ಸಣ್ಣ ಗುರುತಾದರೂ ಬಿಟ್ಟು ಹೋಗಿರುತ್ತಾನೆ. ಕುರುಹು ಬಿಟ್ಟು ಹೋಗದೇ ಇರುವ ಕಳ್ಳತನ ನಡೆಯಲು ಸಾಧ್ಯವಿಲ್ಲ. ನಮ್ಮ ದೇಹದ ಇಡೀ ಆಕೃತಿಯನ್ನು ಕಾಣುವಂತಹ ಕನ್ನಡಿಯನ್ನು ಕಾಣಲು ಸಾಧ್ಯವಿಲ್ಲ. ಅದೇ ರೀತಿ ಬಸವಣ್ಣನ ವ್ಯಕ್ತಿತ್ವವನ್ನು ಎಲ್ಲರೂ ತಿಳಿಯಲು ಸಾಧ್ಯವಿಲ್ಲ. ಕೆಲವರು ಮಾತ್ರ ಅರಿತಿದ್ದಾರೆ ಎಂದು ಹೇಳಿದ್ದಾಳೆ.

> ಎಲೆ ಅಯ್ಯಗಳಿರಾ ಎಲೆಗಳೆದ ವಕ್ಷವ ಕಂಡಿರೆ?
> ಎಲೆಯಯ್ಯಗಳಿರಾ ಊಹಿಲ್ಲದ ಛೋದ್ಯವ ಕಂಡಿರೆ
> ಎಲ್ಲೆ ಸ್ವಾಮಿಗಳಿರಾ ನಿಮ್ಮ ನಿಲುವಿನ ದರ್ಪಣವ ಕಂಡಿರೆ?.ಸಂಗಯ್ಯನಲ್ಲಿ ಸ್ವಯವಳಿದ ಬಸವನ ಕುರುಹ ಕೇಳಿರೆ[೨]

> ಭಕ್ತಿಯಿಲ್ಲದ ಕಿಂಕುರ್ವಾಣವ ಮಾಡಹೋದರೆ
> ಆ ಭಕ್ತಿ ಗಹಿಗಹಿಸಿ ನಕ್ಕಿತು
> ಕಿಂಕುರ್ವಾಣವಿಲ್ಲದಿದ್ದರೆ ಜ್ಞಾನವಿಲ್ಲದಾಯಿತ್ತು
> ಆ ಜ್ಞಾನ ಜ್ಞಾನಕ್ಕೆ ಸುಯಿದಾನವ ನೈದಲು
> ಭಕ್ತಿ ನೆಲೆಯಾಯಿತ್ತಯ್ಯ ಸಂಗಯ್ಯ[೨೩]

"ವಿದ್ಯೆಗೆ ವಿನಯವೇ ಭೂಷಣ" ಎಂಬಂತೆ ಭಕ್ತಿಗೆ ದೈನ್ಯತೆ ಮುಖ್ಯವಾಗಿ ಬೇಕು. ಕೇವಲ ಭಕ್ತಿ ಇದ್ದರೆ ಸಾಲದು ದೈನ್ಯತೆ ಇದ್ದರೆ ಸಾಲದು ಎರಡು ಬೇಕು. ಅಂದಾಗ ಮಾತ್ರ ಭಕ್ತಿಗೆ ದೈನ್ಯತೆ ರಕ್ಷಣೆ ನೀಡುತ್ತದೆ ಎಂಬುದನ್ನು ಈ ವಚನದಲ್ಲಿ ತಿಳಿಸಿದ್ದಾರೆ.

ಭಕ್ತಿ ಇಲ್ಲದೆ ಕೇವಲ ದೈನ್ಯತೆಯನ್ನು ತೋರಿದರೆ ಅದು ಹಾಸ್ಯ ವಿಷಯವಾಗುತ್ತದೆ. ಆಗ ಅದನ್ನು ಕಂಡು ಭಕ್ತಿ ಗಹಗಹಿಸಿ ನಗುತ್ತದೆ. ನಮಗೆ ವಿಧೇಯತೆ ಇಲ್ಲದೇ ಹೋದರೆ ನಮ್ಮಲ್ಲಿ ಎಂತಹ

ವಿದ್ಯೆಯಿದ್ದರೂ ಅದು ವ್ಯರ್ಥವಾದಂತೆ ಅದಕ್ಕಾಗಿ ಜ್ಞಾನಿಗಳು ದೈನ್ಯತೆ ಬೇಕು ಎಂದು ಹೇಳುತ್ತಾರೆ. ಆ ದೈನ್ಯತೆಯಿಂದ ಪಡೆದ ಜ್ಞಾನಕ್ಕೆ ನಮ್ಮ ಚಿತ್ತ ರಕ್ಷಣೆ ನೀಡುತ್ತದೆ. ಆಗ ನಮ್ಮಲ್ಲಿ ಅಚಲವಾದ ಭಕ್ತಿ ನೆಲೆಗೊಳ್ಳುತ್ತದೆ ಎಂಬುದೇ ಮೇಲಿನ ವಚನದ ಸಾರಾಂಶ.

**ಅಡಿಟಿಪ್ಪಣಿಗಳು**

೧. ಶಿವಣ್ಣ ಎಸ್.(ಸಂ), ನೀಲಮ್ಮನ ವಚನಗಳು, ಬಸವ ಸಮಿತಿ, ಬೆಂಗಳೂರು ೧೯೯೨, ಪು.೫

೨. ಅದೇ, ಪು.೬

೩. ಅದೇ, ಪು.೧೪

೪. ಅದೇ, ಪು.೨೫

೫. ಅದೇ, ಪು.೨೬

೬. ಅದೇ, ಪು.೩೦

೭. ಅದೇ, ಪು.೩೨

೮. ಅದೇ, ಪು.೩೬

೯. ಅದೇ, ಪು.೩೪

೧೦. ಅದೇ, ಪು.೪೧

೧೧. ಅದೇ, ಪು.೪೨

೧೨. ಅದೇ, ಪು.೪೫

೧೩. ಅದೇ, ಪು.೪೮

೯

# ಸಂಪಾದನೆಯ ವೈಧಾನಿಕತೆ

ಸಂಪಾದನೆ ಎನ್ನುವ ಕಾರ್ಯವು ಅಷ್ಟೇನೂ ಸುಲಭದ ಕೆಲಸವಲ್ಲ. ಮೂಲ ಪಾಠಗಳಿಗೆ ಸಂಬಂಧಿಸಿದ ಸಾಮಗ್ರಿಗಳಿಂದ ವಾಸ್ತವವನ್ನು ಕಂಡುಕೊಳ್ಳುವ ಒಂದು ಪ್ರಾಮಾಣಿಕ ಪ್ರಯತ್ನವೇ ಸಂಪಾದನೆ. ಗ್ರಂಥ ಸಂಪಾದನೆ ಎನ್ನುವುದನ್ನು ಸ್ಥೂಲವಾಗಿ ಹೇಳುವುದಾದರೆ ಕವಿಯ ಪಠ್ಯವನ್ನು ದೊರೆತ ಆಕರ ಅಥವಾ ಹಸ್ತಪ್ರತಿಗಳ ಸಹಾಯದಿಂದ ಮೂಲ ಪಾಠಕ್ಕೆ ಹತ್ತಿರವಾದಂತೆ ಪಠ್ಯವನ್ನು ಪರಿಷ್ಕರಿಸಿ ಕೊಡುವ ಈ ಪ್ರಕ್ರಿಯೆಯನ್ನು ಗ್ರಂಥಸಂಪಾದನೆ ಎಂದು ಕರೆಯಲಾಗಿದೆ.

ಕಿಟೆಲ್, ಬಿ.ಎಲ್.ರೈಸ್, ಗ್ಯಾರೆಟ್, ಮೋಗ್ಲಿಂಗ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಈ ಪ್ರಕ್ರಿಯೆಗೆ ಬುನಾದಿ ಹಾಕಿದರು. ಡಿ.ಎಲ್.ನರಸಿಂಹಚಾರ್, ಫ.ಗು.ಹಳಕಟ್ಟಿ, ಎಸ್.ಜಿ. ನರಸಿಂಹಚಾರ್ ಮುಂತಾದ ದೇಸೀ ವಿದ್ವಾಂಸರು ಗ್ರಂಥಸಂಪಾದನೆ ಕ್ಷೇತ್ರವನ್ನು ಶ್ರೀಮಂತಗೊಳಿಸಿದರು. ಇವರ ನಂತರ ಇತ್ತೀಚಿನವರಾದ ಎಲ್.ಬಸವರಾಜು, ಟಿ.ವಿ.ವೆಂಕಟಾಚಲ ಶಾಸ್ತ್ರೀ, ಅನಂತ ನಾರಾಯಣರಾವ್, ಎಸ್. ಶಿವಣ್ಣ. ಇವರು ಕೂಡ ಈ ಕ್ಷೇತ್ರಕ್ಕೆ ಅವಿಸ್ಮರಣೀಯ ಕೊಡುಗೆಯನ್ನು ನೀಡಿದ್ದಾರೆ.

ಹೀಗೆ ಸಂಪಾದನೆ ಕಾರ್ಯ ಮುಂದುವರಿಸುವಾಗ ಮಾರ್ಗಸಂಪಾದನೆಗೆ ಅತಿ ವಿರಳ ಹಸ್ತಪ್ರತಿ ದೊರೆಯುವುದರಿಂದ ಇದು ಸ್ವಲ್ಪ ಕಠಿಣಕರ ಕೆಲಸವಾಗುತ್ತದೆ. ಇಂತಹ ಸಂದರ್ಭದಲ್ಲಿ ವಚನ, ಸ್ವರವಚನ, ಸಾಂಗತ್ಯ ಮೊದಲಾದ ದೇಸೀ ಪ್ರಕಾರಗಳ ಕೃತಿಗಳನ್ನು ಸಂಪಾದಿಸಿದ ನಮ್ಮ ಹಿರಿಯ ಹಾಗೂ ಸಮಕಾಲೀನ ಸಂದರ್ಭದ ವಿದ್ವಾಂಸರು ಸಂಪಾದನೆಯ ವೈಧಾನಿಕತೆಯಲ್ಲಿ ತಮ್ಮದೇ ಆದ ಮಾರ್ಗಗಳನ್ನು ಕಂಡುಕೊಂಡಿದ್ದಾರೆ. ಅಂತವರಲ್ಲಿ ಶ್ರೀ ಎಸ್.ಶಿವಣ್ಣನವರ ಕೊಡುಗೆ ಹೇಗಿದೆ ಎಂದು ನೋಡೋಣ.

ಇವರಿಂದ ಸಂಪಾದಿತವಾದ ಹಸ್ತಪ್ರತಿಗಳು, ವಚನಗಳು, ಸ್ವರವಚನಗಳು ಇಂತಹ ಇನ್ನು ಅನೇಕ ಕೃತಿಗಳು ಸಂಪಾದನೆಯ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾದ ಆಕರ ಗ್ರಂಥಗಳಾಗಿ ಕಂಡುಬರುತ್ತವೆ. ಸೂಚಿಕರಣ ಮಾಡುವಾಗ ಇದರಲ್ಲಿ ಹಸ್ತಪ್ರತಿ ಸೂಚಿಗಳು ಮತ್ತು ವರ್ಣನಾತ್ಮಕ ಸೂಚಿಗಳು ಎಂಬ ಎರಡು ವಿಧಾನವಿದೆ. ಸೂಚಿಯಲ್ಲಿ ಮೊದಲು ಕ್ರಮಸಂಖ್ಯೆ, ಸೂಚಿಯ ಹೆಸರು, ಅದನ್ನು ಸಂಪಾದಿಸಿದವರ ಹೆಸರು ಆ ಸೂಚಿ ಪ್ರಕಟವಾದ ವರ್ಷ ಮತ್ತು ಅದರಲ್ಲಿ ಎಷ್ಟು ಪ್ರತಿಗಳಿವೆ ಎಂಬ ವಿಚಾರ ತಿಳಿಸುವಂತೆ

ಮಾಡಿದ್ದಾರೆ. ಆದರೆ ಇದು ಅಲ್ಪ ಮಾಹಿತಿಯನ್ನು ನೀಡುತ್ತದೆ. ಸೂಚಿಯ ಮಧ್ಯಭಾಗ ವಿಷಯ, ಆದಿ, ಅಂತ್ಯ, ತಾಳೆಗರಿ ಸಂಖ್ಯೆಯನ್ನು ನೀಡಿ ರಚಿಸಿದ್ದಾರೆ.

ಶಿವಣ್ಣನವರ ವರ್ಣನಾತ್ಮಕ ಸೂಚಿಯಲ್ಲಿ ಒಂದು ಕೃತಿಯ ಸಮಗ್ರ ಚಿತ್ರಣವನ್ನು ನೀಡುವಂತೆ ರಚಿಸಿದ್ದಾರೆ. ಇದರಿಂದ ಕೃತಿಯ ಸ್ವರೂಪ ಮತ್ತು ಸ್ಥಿತಿಗತಿಯನ್ನು ತಿಳಿಯಬಹುದು. ಹಾಳೆಯ ಮಧ್ಯೆ ಭಾಗ ಕೃತಿಯ ಹೆಸರು, ಅದರ ಕೆಳಗೆ ಕರ್ತೃವಿನ ಹೆಸರು ಅದರ ಕೆಳಗೆ ಸಾಲು. ಹಾಳೆ ಎಡಗಡೆ ತಾಳೆಗರಿ ಸಂಖ್ಯೆ ಅದರ ಅಳತೆ, ಬಲಗಡೆ ಅದರ ಪ್ರಕಾರ, ಅಕ್ಷರ ಎಷ್ಟಿವೆ ಎಂಬುದನ್ನು ತಿಳಿಸುತ್ತಾರೆ. ಅವರ ವರ್ಣನಾತ್ಮಕ ಸೂಚಿಯನ್ನು ನೋಡಿದಾಗ ಆದಿ, ಅಂತ್ಯ, ವಿಶೇಷ ಅಕ್ಷರ ಸ್ವರೂಪ ಎಲ್ಲವನ್ನು ಚಿತ್ರಿಸಿರುತ್ತಾರೆ. ತ್ರುಟೀತ ಭಾಗವನ್ನು(XXX)ಈ ಚಿನ್ಹೆ ಗುರುತಿಸಿರುತ್ತಾರೆ. ಏಕೆಂದರೆ ಇದು ಗ್ರಂಥಲೋಪ ಎಂದರ್ಥ.

ಇವರು ನಡುಗನ್ನಡ ಕಾಲದ ಅನೇಕ ವಚನಗಳನ್ನು ಸಂಪಾದಿಸಿದ್ದಾರೆ. ಮಧ್ಯಕಾಲೀನ ಸಾಹಿತ್ಯದ ಬಗೆಗೆ ಇವರ ಸಂಪಾದನೆ ಅಪೂರ್ವ ಎನ್ನಬಹುದು. ಕುಷ್ಟಗಿ ಕರಿಬಸವೇಶ್ವರನ ವಚನಗಳು, ಚೆನ್ನಬಸವಣ್ಣನವರ ವಚನಗಳು, ವಚನಸಂಕಲನ ಸಂಪುಟ ೩ ಮತ್ತು ೪, ಹೊಸವಚನಗಳು, ನೀಲಮ್ಮನ ವಚನಗಳು ಇವುಗಳ ಸಂಪಾದನೆಯಲ್ಲಿ ಇವರು ತೋರಿರುವ ಶ್ರದ್ಧೆ, ಪರಿಶ್ರಮ ಪಾಂಡಿತ್ಯ ಅಗಾದವಾದುದು. ಶ್ರೀಯುತರು ಅಪಾರ ವಿದ್ವತ್ತಿನ ಪ್ರತಿಭೆ. ಯಾವುದನ್ನೇ ಆಗಲಿ ಸುಲಭವಾಗಿ ಒಪ್ಪಿಕೊಳ್ಳದೆ ಅವುಗಳ ಬಗ್ಗೆ ಚರ್ಚೆ ಮಾಡಿ ನಂತರ ಒಪ್ಪುವಂತಹ ಸೃಜನಶೀಲ ಮತ್ತು ಕ್ರಿಯಾಶೀಲ ವ್ಯಕ್ತಿ. ಇವರ ಸಂಪಾದನೆಯ ವಿಧಾನವನ್ನು ಗಮನಿಸಿದಾಗ ಕೆಳಗಿನ ಅಂಶಗಳು ಗೋಚರಿಸುತ್ತವೆ.

- ಒಂದು ಕೃತಿಯ ಬಗೆಗೆ ಆಳವಾದ ಮಾಹಿತಿಗಾಗಿ ಹಸ್ತಪ್ರತಿ ಭಂಡಾರಗಳಿಗೆ ಭೇಟಿ ಕೊಡುವುದು
- ಆ ಓಲೆ ಕಟ್ಟಿನ ಗರಿಗಳಲ್ಲಿ ಪಾಠಾಂತರ ಕಂಡುಕೊಂಡು ಶುದ್ಧವಾದವನ್ನು ನಿರ್ಣಯಿಸುವುದು
- ಕೃತಿಯ ಆರಂಭದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಪ್ರಸ್ತಾವನೆ ನೀಡುವುದು.
- ಕೃತಿ ಸಂಪಾದನೆಗೆ ತೆಗೆದುಕೊಂಡು ಓಲಿಗರಿಗಳು ಎಲ್ಲಿಂದ ಪಡೆದಿರುವುದರ ಬಗೆಗೆ ಮಾಹಿತಿ ನೀಡುವುದು.
- ವಿಷಯ ಪ್ರಸ್ತಾಪದ ಮುನ್ನ ಕೂಲಂಕುಷವಾಗಿ ವಿವಿಧ ಆಧಾರಗಳನ್ನು ಪರಿಶೀಲಿಸಿ, ಸೂಕ್ತವಾದುದನ್ನು ದಾಖಲಿಸಿ ಆಕರಗಳ ಬಗ್ಗೆ ಅಡಿಟಿಪ್ಪಣಿ ನೀಡುವುದು.
- ಪಾಠಾಂತರ, ಪಾಠ ಪರಿಷ್ಕರಣೆಗೆ ಅನುಕೂಲವಾಗಲು ಸಂಪಾದಿತ ಕೃತಿಗೆ ಅದೇ ಕೃತಿಯ ಅಥವಾ ವಚನಕಾರರ ವಿವಿಧ ಪ್ರತಿ ನೋಡಿ ಸಂಪಾದಿಸಿರುವುದು.

ಕುಷ್ಟಗಿ ಕರಿಬಸವೇಶ್ವರನ ವಚನಗಳ ಸಂಪಾದನೆಯಲ್ಲಿ ಕರಿಬಸವೇಶ್ವರ ಕಾಲವನ್ನು ರೆವರೆಂಡ್ ಉತ್ತಂಗಿ ಚೆನ್ನಪ್ಪನವರು ಕ್ರಿ.ಶ.೧೭೦೦ ಎಂಬುದನ್ನು ಪರಿಷ್ಕರಿಸಿ ಅದನ್ನೇ ತಿಳಿಸಿದ್ದಾರೆ. ಇದರಲ್ಲಿನ ವಚನಗಳು(೯೮) ಪ್ರೊ.ಜಿ.ಎಂ.ಉಮಾಪತಿ ಶಾಸ್ತ್ರಿಗಳು ನೀಡಿದ್ದ ಓಲೆಯಿಂದ ಪರಿಷ್ಕರಿಸಿ ತೆಗೆದುಕೊಂಡಿದ್ದಾರೆ. ಜೊತೆಗೆ "ಲಿಂಗಾಯಿತ ಪತ್ರಿಕೆ ನೋಡಿ ಆಯ್ದಿದ್ದಾರೆ. ಒಟ್ಟು ಇದರಲ್ಲಿ ೯೮ ವಚನಗಳಿವೆ. ಎಲ್ಲಾ ವಚನಗಳು ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ" ಎಂದು ಅಂತ್ಯಗೊಳ್ಳುವಂತೆ ಮಾಡಿದ್ದಾರೆ. ಅನುಬಂಧದಲ್ಲಿ ಅಕಾರಾದಿಯಾಗಿ ಪದಗಳನ್ನು ನೀಡಿದ್ದಾರೆ. ಜನಸಾಮಾನ್ಯರಿಗೂ ಕೂಡ ಅರ್ಥವಾಗುವಂತಹ ಭಾಷೆಯಲ್ಲಿ ಕೆಲವು ದೃಷ್ಟಾಂತ, ಉಪಮೇಗಳನ್ನು ನೀಡುವುದರ ಮೂಲಕ ವಚನಗಳನ್ನು ದಾಖಲಿಸಿದ್ದಾರೆ.

ಚೆನ್ನಬಸವಣ್ಣನವರ ಕೃತಿ ಕೂಡ ತುಂಬಾ ವಿಶಿಷ್ಟತೆಯಿಂದ ಕೂಡಿದೆ. ಇದರಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ವಚನಗಳೂ ಇವೆ. ಚೆನ್ನಬಸವಣ್ಣನ ಬಗ್ಗೆ ಕ್ರಿ.ಶ.೧೫೮೪ರ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವನ್ನು ನೋಡಿದ್ದಾರೆ. ವಚನ ರೂಪದ ರಗಳೆಗಳನ್ನು ದುಂಡು ಕಂಸದೊಳಗೆ ನೀಡಿದ್ದಾಲೆ. ಅಪ್ರಕಟಿತ ವಚನಗಳಿಗೆ ಯಾವುದೇ ಚಿನ್ಹೆ ನೀಡದೆ ಅವೆರಡರ ಮಧ್ಯೆ ಭಿನ್ನತೆ ಗುರುತಿಸಿ ಚಿತ್ರಿಸಿದ್ದಾರೆ. ಷಟ್‌ಸ್ಥಲಗಳ ಬಗ್ಗೆ ಚಿತ್ರದುರ್ಗದ ಮಠದಿಂದ, ಕಲಬುರ್ಗಿ ಅವರ ಬೇರ ಕೃತಿ ನೋಡಿ ಚಿತ್ರಿಸಿದ್ದಾರೆ. ಕೃತಿಯ ಮೊದಲಿಗೆ ಪ್ರಸ್ತಾವನೆಯಲ್ಲಿ ವಚನಗಳನ್ನು ತೆಗೆದುಕೊಂಡಿದ್ದರ ಬಗ್ಗೆ ತಿಳಿಸಿದ್ದಾರೆ. ಅನುಭಂದದಲ್ಲಿ ವಚನಗಳ ಅಕಾರಾದಿ ಕಠಿಣ ಪದಗಳನ್ನು ನೀಡಿದ್ದಾರೆ. ವಚನಗಳ ಮೇಲ್ಭಾಗದಲ್ಲಿ ಕಂಸದೊಳಗಡೆ ಕಾಲವನ್ನು ತಿಳಿಸಲಾಗಿದೆ.

ಬಸವಣ್ಣನ ಪತ್ನಿಯರಲ್ಲಿ ಒಬ್ಬರಾದ ನೀಲಮ್ಮನ ವಚನಗಳನ್ನು ಡಾ.ಸಾ.ಶಿ.ಮರುಳಯ್ಯ ಮತ್ತು ಶಿವಣ್ಣನವರು ಸೇರಿ ತುಮಕೂರು ಜಿಲ್ಲೆಯ, ತಿಪಟೂರು ತಾಲೂಕಿನ ಹೊನ್ನಹಳ್ಳಿಯ ಕರಿಸಿದ್ದೇಶ್ವರ ಮಠದ ಹಸ್ತಪ್ರತಿಯಿಂದ ಜೊತೆಗೆ ಆರ್.ಸಿ.ಹಿರೇಮಠರ ಶಿವಶರಣೆಯರ ವಚನ, ಎಲ್.ಬಸವರಾಜ ಅವರು ಶಿವಗಣ ಪ್ರಸಾದಿ, ಮಹಾದೇವಯ್ಯನವರ ಶೂನ್ಯ ಸಂಪಾದನೆ, ಫ.ಗು.ಹಳಕಟ್ಟಿ ಅವರ ವಚನ ಶಾಸ್ತ್ರಸಾರ ಮುಂತಾದ ಕೃತಿಗಳ ಸಹಾಯದಿಂದ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಒಟ್ಟು ೨೪೮ ವಚನಗಳಿವೆ. ವಚನಗಳ ಮೇಲೆ ಕಂಸದಲ್ಲಿ ವಚನಗಳ ಸಂಖ್ಯೆಯನ್ನು ನೀಡಲಾಗಿದೆ. ಇದು ಅವುಗಳ ಕ್ರಮಾಂಕ ಅರಿಯಲು ಅದೇ ರೀತಿ ಕೆಲವು ವಚನಗಳ ಮೇಲೆ ಒಂದು ನಕ್ಷತ್ರಾಕಾರ(*)ನೀಡಿದ್ದಾರೆ. ಇದರ ಅರ್ಥ ಆರ್.ಸಿ.ಹಿರೇಮಠ ಅವರು ಸಂಪಾದಿಸಿದ ಕೃತಿಯಿಂದ ಪಡೆದಿದೆ ಎಂದರ್ಥ. ಎರಡು ನಕ್ಷತ್ರ ಚಿನ್ಹೆ ಇದ್ದರೆ(**) ವಚನಗಳ ಕ್ರಮಸಂಖ್ಯೆ ತಪ್ಪಿದೆ ಎಂದರ್ಥ. ಪತಿದೈವವೆಂದು ತಿಳಿದುಕೊಂಡು ವಚನ ರಚಿಸಿದ್ದಾಳೆ, ಜೊತೆ ಕೆಲವು ವಚನಗಳು ಆದಿ ಮತ್ತು ಅಂತ್ಯ ಪ್ರಾಸಗಳನ್ನು ಒಳಗೊಂಡಿವೆ.

ಶಾಂತರಸರು ಶಿವಣ್ಣನವರನ್ನು ಕಂಡು ಅವರ ಕಾರ್ಯವೈಖರಿ ನೋಡಿ ಪ್ರಸಿದ್ಧವಾಗದ ಕೆಲವು ವಚನ ಮತ್ತು ಅಪ್ರಕಟಿತ ವಚನಗಳನ್ನು ಗುರುತಿಸಿ ಎಂದು ಹೇಳಿದಾಗ ಅವರ ಪ್ರೇರಣೆಯಿಂದ ಹೊಸವಚನಗಳು ಎಂಬ ಕೃತಿ ರಚಿಸಿದರು. ಇದರಲ್ಲಿ ಸುಮಾರು ೧೧ ಜನ ವಚನಕಾರರ ವಚನಗಳನ್ನು ಗುರುತಿಸಿದ್ದಾರೆ. ಮೇಲೆ ವಚನಕಾರರ ಹೆಸರು ಕಂಸದೊಳಗೆ ಅವರ ಕಾಲದೊಂದಿಗೆ ವಚನ ಆರಂಭವಾಗುತ್ತವೆ. ಅನುಬಂಧದಲ್ಲಿ ಕಠಿಣ ಪದಗಳ ಅರ್ಥವನ್ನು ನೀಡಿದ್ದಾರೆ. ಮತ್ತು ತಮ್ಮ ಕೃತಿ ರಚನೆಗೆ ಸಹಾಯಕರಾದವರ ಬಗ್ಗೆ ವಿವರ ನೀಡಿದ್ದಾರೆ.

ತಾವು ಸಂಗ್ರಹಿಸಿದ ಅನೇಕ ವಚನಗಳನ್ನು ವಚನ ಸಂಕಲನ ಎಂಬ ಹೆಸರಿನಿಂದ ಸಂಪುಟ ಮಾಡಿದ್ದಾರೆ. ವಚನ ಸಂಕಲನ ಸಂಪುಟ ೩ ಮತ್ತು ೪ ರಲ್ಲಿ ಎಲ್.ಬಸವರಾಜು ಅವರ ಅಲ್ಲಮ ವಚನ ಚಂದ್ರಿಕೆ ಮತ್ತು ಆರ್.ನರಸಿಂಹಚಾರ್‌ರ ಕವಿಚರಿತೆ ನೋಡಿ ಪ್ರಭುದೇವರ ವಚನ ಮತ್ತು ಶಿವನ ಮಹಿಮೆಯನ್ನು ಕೊಂಡಾಡುವ ವಚನ ರಚಿಸಿದ್ದಾರೆ. ಜೊತೆಗೆ ಇದರಲ್ಲಿ ಷಟ್‌ಸ್ಥಲ, ಏಕೋತ್ತರ ಶತಸ್ಥಲಗಳ ಬಗ್ಗೆ ವಚನ ಸಂಗ್ರಹಿಸಿ ಅದನ್ನು ಜನ ಸಾಮಾನ್ಯರಿಗೆ ಮುಟ್ಟಿಸುವ ಕಾರ್ಯ ಮಾಡಿದ್ದಾರೆ.

ಸಾಮಾನ್ಯವಾಗಿ ಇವರ ಸಂಪಾದನೆಯ ಬಗ್ಗೆ ಹೆಳುವುದಾದರೆ ಕರ್ನಾಟಕದಲ್ಲಿ ಇವರು ಭೇಟಿ ನೀಡದ ಹಸ್ತಪ್ರತಿ ಭಂಡಾರ, ಮಠಮಾನ್ಯಗಳು ಇಲ್ಲವೆಂದೇ ಹೇಳಬಹುದು. ಹಸ್ತಪ್ರತಿ ಬಗೆಗಿನ ಅವಳ ಕಾಳಜಿ ಇವರನ್ನು ಈ ಕಾರ್ಯ ಮಾಡಲು ಹುರಿದುಂಬಿಸಿತೆಂದು ಹೇಳಬಹುದು. ಯಾವುದೇ ಒಂದು ಸಣ್ಣ ಮತ್ತು ಹರಿದ ಪ್ರತಿ ಸಿಕ್ಕರೆ ಅದರ ಮುಂದಿನ ಸಾಲು ಏನೂ ಇತ್ತು ಎಂದು ಹೇಳುವ ಸಾಮರ್ಥ್ಯ ಇವರಿಗಿದ್ದಿತು. ಬೇರೆಯವರ ಸಂಪಾದನೆಗಿಂತ ಇವರದು ವಿಶಿಷ್ಟ, ಸ್ಪಷ್ಟ ನಿಖರ ಮತ್ತುವೈಜ್ಞಾನಿಕ ರೀತಿಯನ್ನು ಒಳಗೊಂಡಿರುವುದೇ ಇವರ ಸಂಪಾದನೆಯ ಒಂದು ವೈಶಿಷ್ಟ್ಯ ಎಂದು ಹೇಳಬಹುದು.

ಶಿವಣ್ಣನವರು ಸಂಪಾದಿಸಿರುವ ಕೃತಿಗಳಲ್ಲಿ ಬಹಳಷ್ಟು ಅಪ್ರಸಿದ್ಧ ಕವಿಗಳ, ಕೃತಿಗಳ ಹಾಗೂ ಬಹುಮಟ್ಟಿಗೆ ವೀರಶೈವ ಧಾರ್ಮಿಕ ಕಾವ್ಯಗಳು, ಇವರ ಸಂಪಾದನೆಯ ಒಂದು ಮಿತಿ ಎಂದರೆ ಕೃತಿಯ ಪದ್ಯದ ಜೊತೆಗೆ ಕೃತಿಯ ವಸ್ತು, ಭಾಷೆ, ಛಂದಸ್ಸು ಇತ್ಯಾದಿ ವಿಷಯಗಳ ಬಗ್ಗೆ ಪೀಠಿಕೆಯಲ್ಲಿ ಇಲ್ಲದೇ ಇರುವುದು.

ಇವರ ಇನ್ನೊಂದು ಕೊಡುಗೆ ಎಂದರೆ ನಾಡಿನಾದ್ಯಂತ ಯಾರೇ ಸಂಶೋಧನೆ ಕೈಗೊಂಡರೆ ಅದರಲ್ಲೂ ಹಳಗನ್ನಡ ಹಾಗೂ ನಡುಗನ್ನಡ ಸಾಹಿತ್ಯ ಗ್ರಂಥ ಸಂಪಾದನೆ. ವ್ಯಾಕರಣ, ಹಸ್ತಪ್ರತಿಶಾಸ್ತ್ರ ಮೊದಲಾದ ಪ್ರಕರಣಗಳಲ್ಲಿ ಸಂಶೋಧನೆ ಕೈಗೊಳ್ಳುವವರು ಇವರನ್ನು ಸಂಪರ್ಕಿಸದಿದ್ದರೆ ಅವರ ಸಂಶೋಧನೆ ಅಷ್ಟೊಂದು ಯಶಸ್ವಿಯಾಗಲಾರದು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು ಎಂದು ಹೇಳಬಹುದು.

ನಂತರದ ಗ್ರಂಥಸಂಪಾದಕರಿಗೆ ಹಸ್ತಪ್ರತಿಸೂಚಿಕಾರರಿಗೆ ವಿದ್ವಾಂಸಕರಿಗೆ, ಹಾಗೂ ಸಂಶೋಧಕರಿಗೆ ಅಪಾರವಾದ ಆಕರ ಸಂಪತ್ತನ್ನು ಶ್ರೀ ಎಸ್.ಶಿವಣ್ಣನವರು ಒದಗಿಸಿಕೊಟ್ಟಿದ್ದಾರೆ. ಅವರ ಅಪಾರ ದೈಹಿಕ ಹಾಗೂ ಬೌದ್ಧಿಕ ಶ್ರಮ ಅಡಗಿರುವುದೇ ಇಲ್ಲಿ. ಅದಕ್ಕೆಂದೇ ತಮ್ಮ ದೈಹಿಕ ಆರೋಗ್ಯವನ್ನು ಲೆಕ್ಕಿಸದೇ ಅಹರ್ನಿಶ ಹಸ್ತಪ್ರತಿ ಕ್ಷೇತ್ರಕ್ಕೇ ದುಡಿದು ಕಡೆಗೆ ತೆರಮರೆಗೆ ಸರಿದ ಶ್ರದ್ಧಾವಂತ ವಿದ್ವಾಂಸರೆಂದರೆ ಎಸ್.ಶಿವಣ್ಣನವರೆಂದೇ ಯಾರಾದರೂ ಹೇಳಬೇಕಾಗುತ್ತದೆ.

# ೧೦

# ಸಮಾರೋಪ

ಇಂದಿನ ಸಂಶೋಧನೆಗಳೆಲ್ಲಾ ಪ್ರಸಿದ್ಧ ಕವಿ, ಕೃತಿ, ಪಾತ್ರಚಿತ್ರಣ ಸಮುದಾಯದ ಮೇಲಿನ ಅಧ್ಯಯನ ಮುಂತಾದವುಗಳನ್ನು ನೋಡಿದ್ದೇವೆ. ಇಂತಹ ಅಧ್ಯಯನಗಳಲ್ಲಿ ಹಸ್ತಪ್ರತಿ ಮತ್ತು ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಡಿ.ಎಲ್.ನರಸಿಂಹಚಾರ್, ಟಿ.ವಿ.ವೆಂಕಟಾಚಲಶಾಸ್ತ್ರೀ, ಎಸ್.ಜಿ.ನರಸಿಂಹಚಾರ್ ಮುಂತಾದವರು ತುಂಬಾ ಪ್ರಸಿದ್ಧರಾದವರ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಇದೇ ಕ್ಷೇತ್ರದಲ್ಲಿ ಅವಿಸ್ಮರಣೀಯ ಸೇವೆ ಸಲ್ಲಿಸಿ ಹಸ್ತಪ್ರತಿಗಳ ಬಗ್ಗೆ ಆತ್ಯಾಸಕ್ತರಾಗಿ ಎಲೆಮರೆಯ ಕಾಯಿಯಂತೆ ಇರುವ ಸರಳ ಸಜ್ಜನಿಕೆಯ ವ್ಯಕ್ತಿ ಶ್ರೀ ಎಸ್.ಶಿವಣ್ಣನವರ ವಚನ ಸಾಹಿತ್ಯ ಸಂಪಾದನೆ ಎಂಬ ವಿಷಯದ ಮೇಲೆ ಅಧ್ಯಯನ ಕೈಗೊಂಡಿದ್ದು, ಅವರ ಅಪಾರಶ್ರಮ, ಸಂಪಾದನಾ ರೀತಿ ಮತ್ತು ಕಾರ್ಯವೈಖರಿಯನ್ನು ಕುರಿತು ಈ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

ಇವರು ವಿದ್ಯಾರ್ಥಿ ದೆಸೆಯಲ್ಲಿಯೇ ಆಳವಾದ ಅಧ್ಯಯನವನ್ನು ಕೈಗೊಳ್ಳುವಂಥವರಾಗಿದ್ದರು. ಹೀಗಿರುವಾಗ ಆರ್.ನರಸಿಂಹಚಾರ್ಯರ ಬಗ್ಗೆ ಓದಿದ್ದರು. ಇವರ ಕುಟುಂಬ ಧಾರ್ಮಿಕ ಆಚರಣೆಯ ಕುಟುಂಬವಾದ್ದರಿಂದ ಇವರಿಗೆ ದೇವರು ಧರ್ಮದ ಬಗ್ಗೆ ಆಸಕ್ತಿ ಹೆಚ್ಚು. ಇವರ ಗುರುಗಳಾದ ಡಿ.ಎಲ್.ನರಸಿಂಹಚಾರ್‌ರ ಪ್ರೇರಣೆಯಿಂದ ಹಸ್ತಪ್ರತಿ ಸಂಶೋಧನೆಗೆ ತೊಡಗಿ ಅದರಲ್ಲಿ ಸಿಗುವ ಮಾಹಿತಿಯನ್ನು ಕಲೆಹಾಕಿ ಅನೇಕ ಕೃತಿಗಳನ್ನು ಸಂಪಾದಿಸಿದರು. ಅದರಲ್ಲಿ ವಚನಗಳ ಸಂಪಾದನೆಯೂ ಒಂದು. ಆರ್.ನರಸಿಂಹಚಾರ್ಯರ ಕವಿಚರಿತೆಯಲ್ಲಿ ಇಲ್ಲದ ಕವಿಗಳ ಬಗ್ಗೆ ಗುರುತಿಸಬೇಕೆಂಬುದೇ ಇವರ ಹಂಬಲ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯಲ್ಲಿ ಇಡೀ ಅಧ್ಯಯನದ ಸಂಕ್ಷಿಪ್ತರೂಪವನ್ನು ತಿಳಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಶಿವಣ್ಣನವರ ಬಾಲ್ಯಜೀವನ ಮತ್ತು ಅವರ ವಿದ್ಯಾಭ್ಯಾಸ, ಸೂಚಿರಚನೆಯ ವೈಶಿಷ್ಟ್ಯತೆ, ಹಲವು ಸೂಚಿಗಳ ಸಂಕ್ಷಿಪ್ತ ಪರಿಚಯ. ನಂತರ ಕೆಲವು ಕೃತಿ, ಕಾಲ ಮತ್ತು ವಚನಗಳನ್ನು ಗುರುತಿಸಿ ಅದರ ಬಗ್ಗೆ ನಿಖರ ಮಾಹಿತಿ ನೀಡಿರುವುದನ್ನು ಕಾಣಬಹುದು.

ಅಧ್ಯಾಯ ಮೂರರಲ್ಲಿ ವಚನಗಳೆಂದರೇನು? ಅದರ ಅರ್ಥ ಇವುಗಳ ಉಗಮ ಮತ್ತು ಕೆಲವು ವಚನಕಾರರ ವಚನಗಳ ಉದಾಹರಣೆಗಳೊಂದಿಗೆ ಆಧುನಿಕ ಕವಿಗಳವರೆಗೆ ಹೇಗೆ ಹಬ್ಬಿತು ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕುಷ್ಟಗಿ ಕರಿಬಸವೇಶ್ವರನ ವಚನಗಳ ವಿವೇಚನೆ. ಇದರಲ್ಲಿ ಸುಮಾರು ೧೮ ವಚನಗಳನ್ನು ಮಾತ್ರ ತೆಗೆದುಕೊಂಡು ಅವುಗಳ ತಾತ್ಪರ್ಯವನ್ನು ತಿಳಿಸಲಾಗಿದೆ. ಪ್ರಸ್ತುತ ವಚನಗಳಲ್ಲಿ ಗುರು, ಲಿಂಗ, ಜಂಗಮರ ಬಗ್ಗೆ ಪಾರಮಾರ್ಥಿಕ ಅರ್ಥವನ್ನು ಕಟ್ಟಿಕೊಡಲಾಗಿದೆ.

ಅಧ್ಯಾಯ ಐದರಲ್ಲಿ ಷಟ್‌ಸ್ಥಲ ಬ್ರಹ್ಮನೆಂದು ಪ್ರಸಿದ್ಧನಾದ ಚೆನ್ನಬಸವಣ್ಣನ ವಚನ ಕುರಿತು ಚರ್ಚಿಸಲಾಗಿದೆ. ಇಲ್ಲಿಯೂ ಸಹ ಆಚಾರ, ವಿಚಾರ, ಧಾಂಬಿಕ ಭಕ್ತಿಯನ್ನು ಕುರಿತು ವಿವೇಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಅಲ್ಲಮಪ್ರಭುವಿನ ದೃಢಭಕ್ತಿ, ಶಿವನನ್ನು ಸ್ಮರಿಸುವ ಮತ್ತು ಕೊಂಡಾಡುವ ವಚನಗಳನ್ನು, ಜೊತೆಗೆ ಷಟ್‌ಸ್ಥಲಗಳು ಯಾವುವು, ಶತಸ್ಥಲ ಕಲಿದೇವರದೇವ, ಸೊಡ್ಡಳ ಬಾಚರಸ ಬಿಬ್ಬಬಾಚಯ್ಯ ಮುಂತಾದ ಪುರಾತನ ವಚನಕಾರರ ವಚನಗಳನ್ನು ವಚನ ಸಂಕಲನ ಸಂಪುಟ ೩ ಮತ್ತು ೪ರಲ್ಲಿನ ವಚನಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಕವಿಚರಿತೆಯಲ್ಲಿ ಸಿಗದ ಅನೇಕ ಹೊಸ ವಚನಗಳ ಬಗ್ಗೆ ತಿಳಿಸುವುದೇ ಈ ಅಧ್ಯಾಯದ ವೈಶಿಷ್ಟ್ಯ. ಜೊತೆಗೆ ಅಪ್ರಕಟಿತ ವಚನಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ನೀಲಮ್ಮನ ವಚನಗಳ ಬಗ್ಗೆ ಮತ್ತು ಈಕೆ ಬಸವಣ್ಣನ ವಿಚಾರ ಪತ್ನಿಯೆಂದು ಮತ್ತು ತನ್ನ ಗಂಡನಿಗೂ ಹಾಗೂ ನನಗೂ ತಾಯಿ ಮಗುವಿನ ಸಂಬಂಧ, ದೇವ ಭಕ್ತನ ಸಂಬಂಧ ಇದೆ ಎಂದು ಈಕೆಯ ವಚನಗಳಿಂದ ತಿಳಿಯಬಹುದಾಗಿದೆ.

ಅಧ್ಯಾಯ ಒಂಭತ್ತರಲ್ಲಿ ಶ್ರೀಯುತ ಎಸ್.ಶಿವಣ್ಣನವರ ಸಂಪಾದನೆಯ ವೈಖರಿಯನ್ನು ಕಿರು, ಅವರ ವೈಧಾನಿಕತೆಯನ್ನು ಕುರಿತು ಚರ್ಚಿಸಲಾಗಿದೆ.

ಅನುಬಂಧ ಒಂದರಲ್ಲಿ ಶಿವಣ್ಣನವರು ರಚಿಸಿರುವ ಕೃತಿಗಳ ಪಟ್ಟಿಯನ್ನು ಕಾಣಬಹುದು. ಎರಡರಲ್ಲಿ ಶಿವಣ್ಣನವರ ಬಾಲ್ಯ ವಿದ್ಯಾಭ್ಯಾಸ, ಸಾಹಿತ್ಯಕೃಷಿ ಮತ್ತು ಅವರಿಗೆ ಸಂದಪ್ರಶಸ್ತಿಗಳ ಬಗ್ಗೆ ತಿಳಿಸಲಾಗಿದೆ. ಮೂರಲ್ಲಿ ಶಿವಣ್ಣನವರು ಸಂಪಾದಿಸಿರುವ ಏಳು ವಚನಗಳಿಗೆ ಸಂಬಂಧಿಸಿದ ಕೃತಿಯಲ್ಲಿನ ಕಠಿಣ ಪದಗಳ ಅರ್ಥಕೋಶವನ್ನು ಆಕಾರಾದಿಯಾಗಿ ನೀಡಲಾಗಿದೆ. ಇದರಿಂದ ವಚನಗಳನ್ನು ಅರ್ಥೈಸಿಕೊಳ್ಳುವುದು ಸುಲಭ ಸಾಧ್ಯವಾಗುತ್ತದೆ. ನಾಲ್ಕರಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಹಾಯಕವಾದ ಆಕರ ಗ್ರಂಥಗಳ ಪಟ್ಟಿ ನೀಡಲಾಗಿದೆ.

ಒಟ್ಟಾರೆ ಈ ಅಧ್ಯಯನದಲ್ಲಿ ಹಸ್ತಪ್ರತಿ ಹಾಗೂ ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಅವಿಶ್ರಾಂತವಾಗಿ ದುಡಿದ ಶ್ರೀ ಎಸ್.ಶಿವಣ್ಣನವರ ಜೀವನ, ಅವರು ಸಂಪಾದಿಸಿರುವ ವಚನಗಳ ವೈಶಿಷ್ಟ್ಯ ಮತ್ತು ಅವರ ಸಂಪಾದನ ವೈಧ್ಯನಿಕತೆ ಅಪ್ರಕಟಿತ ವಚನ ಸಂಪತ್ತನ್ನು ಬೆಳಕಿಗೆ ತಂದ ಶ್ರೇಯಸ್ಸು, ಇವುಗಳನ್ನು ಪ್ರಧಾನವಾಗಿರಿಸಿಕೊಂಡು ಚರ್ಚೆಯನ್ನು ಬೆಳೆಸಲಾಗಿದೆ. ಒಟ್ಟಾರೆ ಶಿವಣ್ಣನವರ ಕೊಡುಗೆ ಈ ಕ್ಷೇತ್ರಕ್ಕೆ ಅವಿಸ್ಮರಣೀಯ ಎಂಬುದನ್ನು ಬಿಂಬಿಸುವುದೇ ಈ ಕಿರು ನಿಬಂಧದ ಆಶಯವಾಗಿದೆ.

# ಅನುಬಂಧಗಳು

೧. ಎಸ್.ಶಿವಣ್ಣನವರ ವಾಙ್ಮಯ ಸೂಚಿ

೨. ಎಸ್.ಶಿವಣ್ಣನವರ ಬದುಕಿನ ಮುಖ್ಯ ಘಟನೆಗಳು

೩. ಅರ್ಥಸೂಚಿ

೪. ಆಕರಗ್ರಂಥಗಳು

# ಎಸ್.ಶಿವಣ್ಣನವರ ವಾಙ್ಮಯ ಸೂಚಿ

ಶ್ರೀಯುತ ಎಸ್.ಶಿವಣ್ಣನವರು ಗ್ರಂಥಸಂಪಾದನೆಯಲ್ಲಿ ತಮ್ಮದೇ ಆದ ಕೀರ್ತಿಯನ್ನು ಉಳಿಸಿಕೊಂಡಿದ್ದಾರೆ. ಅದಕ್ಕೆ ನಿದರ್ಶನವಾಗಿ ಅವರು ಮಾಡಿರುವ ಈ ಕೆಳಗಿನ ಸಾಹಿತ್ಯ ಸೇವೆಯನ್ನು ನೋಡಿದರೆ ನಮಗೆ ಅರ್ಥವಾಗುತ್ತದೆ.

೧. ಕರ್ನಾಟಕ ಕವಿಚರಿತೆಯ ಅನುಕ್ತ ಕೃತಿಸೂಚಿ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೬೭

೨. ವೀರಶೈವ ಅಪ್ರಕಟಿತ ಗ್ರಂಥಸೂಚಿ, ವೀರಶೈವ ಅಧ್ಯಯನ ಸಂಸ್ಥೆ ಗದಗ, ೧೯೮೨

೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨

೪. ಶ್ರೀ ಜಗದ್ಗುರು ತೋಂಟದಾರ್ಯಮಠದ ಹಸ್ತಪ್ರತಿಸೂಚಿ, ಸಂ.೧, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೫

೫. ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿಸೂಚಿ ಸಂ.೧, ಚಿತ್ರದುರ್ಗ, ೧೯೯೧

೬. ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು, ಸಂ.೧, ವೀರಶೈವ ಅಧ್ಯಯನ ಸಂಸ್ಥೆ, ಗದಗ

೭. ಹಸ್ತಪ್ರತಿ ಸೂಚಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೮. ಶಂಕರದೇವ ಕೃತ ಶಂಕರದೇವ ಕಂದಕಗಳು, ಸರ್ಪಭೂಷಣ ಮಠ, ಬೆಂಗಳೂರು, ೧೯೮೨

೯. ಮುರಿಗೆ ಶಾಂತವೀರಸ್ವಾಮಿಗಳ ಸ್ತೋತ್ರಕರಂಡ, ಬೃಹನ್ಮಠ, ಚಿತ್ರದುರ್ಗ, ೧೯೮೭

೧೦. ಶಂಕರ ದೇವರ ಸ್ವರವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೭

೧೧. ಮುರಿಗೆ ಶಾಂತವೀರ ಸ್ವಾಮಿಗಳ ಕೃತಿಗಳು, ಬೃಹನ್ಮಠ, ಚಿತ್ರದುರ್ಗ, ೧೯೮೯

೧೨. ಮುರಿಗೆ ಶಾಂತಬಸವ ದೇವನ ಸ್ವರಚನಗಳು, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೮

೧೩. ಕುಷ್ಟಗಿ ಕರಿಬಸವೇಶ್ವರನ ವಚನಗಳು, ವೀರಶೈವ ಅಧ್ಯಯನ ಸಂಸ್ಥೆ, ೧೯೯೦

೧೪. ವಚನ ಸಂಕಲನ ಸಂ.೩, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೧

೧೫. ಹಂಪೆಯ ಹರೀಶ್ವರ ಕೃತ ಹರೀಶ್ವರ ದೇವರ ಕಂದ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೯೨

೧೬. ಕೊಂಡಗುಳಿ ಕೇಶಿರಾಜ ಕೃತ ಕೇಶಿರಾಜ ದಣ್ಣಾಕರ ಕಂದ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೯೨
೧೭. ಸಮಗ್ರ ವಚನ ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩
೧೮. ಮಹಾಂತ ದೇಶಿಕರ ಬಸವೇಶ್ವರ ಭಕ್ತಿಸಾರ, ಬೃಹನ್ಮಠ, ಚಿತ್ರದುರ್ಗ
೧೯. ಇಮ್ಮಡಿ ಗುರುಸಿದ್ದ ಸ್ವಾಮಿಗಳ ಸ್ವರವಚನಗಳು, ಆನಂದಪುರ, ೧೯೯೫
೨೦. ಶೃಂಗಾರಮ್ಮ ವಿರಚಿತ ಪದ್ಮಿನಿ ಕಲ್ಯಾಣ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೯೫
೨೧. ಸ್ವರವಚನ ಸಂಪುಟ ೧ ಮತ್ತು ೨, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೯೫
೨೨. ಸರ್ಪಭೂಷಣ ಶಿವಯೋಗಗಳ ಕೈವಲ್ಯ ಕಲ್ಪವಲ್ಲರಿ, ಶಿವಯೋಗಿಗಳ ಮಠ, ಬೆಂಗಳೂರು
೨೩. ಚನ್ನಬಸವಣ್ಣನವರ ವಚನಗಳು, ಬಡ್ಗ ಪ್ರಕಾಶನ, ತುಮಕೂರು, ೧೯೯೫
೨೪. ಯತಿ ಬಸವಲಿಂಗೇಶ ವಿರಚಿತ, ತೋಂಟದ ಸಿದ್ದೇಶ್ವರ ಸಾಂಗತ್ಯ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೭
೨೫. ಸಿದ್ದಲಿಂಗ ಸ್ತೋತ್ರಪರಿಮಣ, ವಿಜಯನಗರ, ಬೆಂಗಳೂರು, ೧೯೯೮
೨೬. ಹೊಸವಚನಗಳು, ಅಪ್ರಕಟಿತ, ಮುತ್ತಿನಹಾರ ಮಾಲಿಕೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮
೨೭. ಶಂಕರ ದೇವರು ನಿರೂಪಿಸಿದ ಕಂದ, ಬೆಂಗಳೂರು, ೨೦೦೦
೨೮. ಪಂಚಶತಕ, ಸರಸ್ವತಿಪುರಂ, ಮೈಸೂರು, ೧೯೯೯
೨೯. ಕೆಂಬಾವಿ ಬೋಗಣ್ಣನ ಸಾಂಗತ್ಯ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೮
೩೦. ಗುರುಭಕ್ತನ ಕಥೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೭
೩೧. ಹಳೆಯ ಗದ್ಯ ಸಾಹಿತ್ಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೧
೩೨. ಚಂದ್ರ ಸಾಗರ ವರ್ಣಿಯ ಕೃತಿಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೧
೩೩. ವಚನ ಸಂಕಲನ ಸಂಪುಟ ೪, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೨
೩೪. ನೀಲಮ್ಮನ ವಚನಗಳು, ಬಸವಸಮಿತಿ, ಬೆಂಗಳೂರು, ೧೯೯೩
೩೫. ತತ್ವಪದಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦
೩೬. ಬಿಡುಮುತ್ತು, ಲೇಖನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೪

೨

## ಎಸ್.ಶಿವಣ್ಣನವರ ಬದುಕಿನ ಮುಖ್ಯ ಘಟನೆಗಳು

- ಜನನ : ೦೧.೦೨.೧೯೪೦
- ಸ್ಥಳ : ಅತ್ತಿಬೆಲೆ, ಅನೇಕಲ್ಲು ತಾಲ್ಲೂಕು, ಬೆಂಗಳೂರು ಜಿಲ್ಲೆಯ
- ತಂದೆ ತಾಯಿ : ಬಿ.ಗುರುಶಂಕರಪ್ಪ, ಗೌರಮ್ಮ
- ಬಾಲ್ಯ ಮತ್ತು ಮಾಧ್ಯಮಿಕ, ಶಿಕ್ಷಣ : ಅತ್ತಿಬೆಲೆ
- ಉನ್ನತ ಶಿಕ್ಷಣ : ಮೈಸೂರಿನಲ್ಲಿ ಎಂ.ಎ.ವಿದ್ಯಾಭ್ಯಾಸ, ಎಲ್.ಬಸವರಾಜು ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಮಹಾಕವಿ ಪಂಪ ವಿಷಯ ಕುರಿತು
- ೧೯೭೧ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಬಂದರು. ೧೯೭೫ ರಿಂದ ಹಸ್ತಪ್ರತಿ ವಿಭಾಗದ ಸಂಪಾದಕರಾಗಿ ನೇಮಕವಾದರು. ಹಲವು ವರ್ಷಗಳ ಕಾಲ ಅಲ್ಲಿಯೇ ಸೇವೆ ಸಲ್ಲಿಸಿ ನಂತರ ನಿವೃತ್ತರಾದರು.
- ಮರಣ ೦೧.೦೮.೨೦೦೮ರಲ್ಲಿ ಲಿಂಗೈಕ್ಯರಾದರು.
- ಒಂದು ಸಾವಿರ ಲೇಖನಗಳನ್ನು ಬರೆಯುವಷ್ಟು ಮಾಹಿತಿ ಇವರ ಹತ್ತಿರ ಇದ್ದಿತು.
- ಇವರನ್ನು ಆಕರಗಳ ವಿಜ್ಞಾನಿ ಎಂದು ಕಿ.ರಂ.ನಾಗರಾಜ ಅವರು ಲಂಕೇಶ್ ಪತ್ರಿಕೆಯಲ್ಲಿ ತಿಳಿಸಿದ್ದಾರೆ.
- ಅರ್ಧ ಓಲೆಗರಿಯಲ್ಲಿನ ವಿಷಯ ಸಿಕ್ಕರೆ ಅದನ್ನು ಪೂರ್ತಿಗೊಳಿಸುವಷ್ಟು ವಿದ್ವತ್ ಇವರಲ್ಲಿತ್ತು.
- ಇವರ ಜೀವನದ ಬಹುದೊಡ್ಡ ಕಾರ್ಯವೆಂದರೆ ಚಿತ್ರದುರ್ಗದ ಬೃಹನ್ಮಠದ ಹಸ್ತಪ್ರತಿ ಸೂಚಿ ತಯಾರಿಸಿದ್ದು.
- ಇವರ ಒಂದು ನೋವಿನ ಘಟನೆ ಎಂದರೆ ಮಹಾಕವಿ ಪಂಪ ಪ್ರಬಂಧ ಅರ್ಧಕ್ಕೆ ನಿಂತು ಹೋದದ್ದು.
- ಹವ್ಯಾಸ ಇವರು ಬಿಡುವಿನ ಸಮಯದಲ್ಲಿ ಪತ್ತೇದಾರಿ ಕಾದಂಬಗಳನ್ನು ಓದುವ ಹವ್ಯಾಸ ಇದ್ದಿತು.
- ಅವರು ಇನ್ನು ಹೆಚ್ಚಿನ ಸಾಹಿತ್ಯ ಕೃಷಿಯನ್ನು ಮಾಡುವ ಹಂತದಲ್ಲಿದ್ದರು. ಆದರೆ ಅವರ ಅನಾರೋಗ್ಯದ ಸಮಸ್ಯೆಯಿಂದಾಗಿ ಅವರಿಗೆ ಕಫದ ತೊಂದರೆ ಬಹಳ ಕಾಡುತ್ತಿತ್ತು.

**ಕೊನೆಯ ಘಟನೆ**

ಅವರು ಕಾಲವಾಗುವ ಸಮಯದ ತುಸು ಹಿಂದೆ ಕಫದ ತೊಂದರೆಯಿದ ಉಸಿರಾಟ ನಿಂತಿತು. ಆಗ ತುರ್ತಾಗಿ ಅಂಬುಲೈನ್ಸ್‌ನಲ್ಲಿ ಅಸ್ಪತ್ರೆಗೆ ಕರೆದೊಯ್ಯುವಾಗ ರಸ್ತೆಯ ಮಧ್ಯದಲ್ಲಿ ಹಾಕಿರುವ ಹಂಪ್ಸ್‌ನಿಂದ ವಾಹನ ಒಮ್ಮೆ ಎತ್ತಿ ಹಾಕಿತು. ಆಗ ಶಿವಣ್ಣನವರ ಕಫ ಸ್ವಲ್ಪ ಸರಿದು ಉಸಿರಾಟ ತಾತ್ಕಾಲಿಕವಾಗಿ ಸರಿಹೋಯಿತು. ಆಗ ಅಸ್ಪತ್ರೆಗೆ ದಾಖಲು ಮಾಡಿದರು. ೧.೦೮.೨೦೦೮ರ ರಾತ್ರಿ ಅವರು ಕೊನೆ ಉಸಿರೆಳೆದರು. ಗ್ರಂಥಸಂಪಾದನಾ ಕ್ಷೇತ್ರದ ಒಂದು ತಾರೆ ಮಿನುಗಿ ಮಾಯವಾಯಿತು.

ಮೇಲೆ ನೋಡಿದ ಶಿವಣ್ಣನವರ ಬದುಕಿನ ಘಟನೆಗಳನ್ನು ಅವರ ಶಿಷ್ಯ ಬಳಗದಲ್ಲಿ ಒಬ್ಬರಾದ ಡಾ.ಬಿ.ನಂಜುಂಡಸ್ವಾಮಿ ತುಮಕೂರು ಇವರು ನೀಡಿದ್ದನ್ನು ನಾನು ಇಲ್ಲಿ ನಿರೂಪಿಸಿದ್ದೇನೆ.

**ಇವರಿಗೆ ಸಂದ ಪ್ರಶಸ್ತಿಗಳು**

ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿ ಹಲವಾರು ಸಂಘ ಸಂಸ್ಥೆಗಳು ಸನ್ಮಾನ ಮಾಡಿವೆ.

- ೧೯೯೫ರಲ್ಲಿ ಸಾಹಿತ್ಯ ಅಕಾಡೆಮಿ ಅತ್ಯುತ್ತಮ ಸಂಪಾದಕ ಪ್ರಶಸ್ತಿ
- ೧೯೯೬ರಲ್ಲಿ ಶರಣ ಸಾಹಿತ್ಯ ಸಮ್ಮೇಳನದ ಗೌರವ ಪ್ರಶಸ್ತಿ
- ೧೯೯೭ರಲ್ಲಿ ಬಸವಕಲ್ಯಾಣ ಪ್ರಶಸ್ತಿ
- ಸುತ್ತೂರು ಮಠದ ಗೌರವ ಪ್ರಶಸ್ತಿ
- ಸಾವಳಗಿ ಮಠದ ಗೌರವ ಪ್ರಶಸ್ತಿ
- ಗದುಗಿನ ತೋಂಟದಾರ್ಯಮಠದ ಗೌರವ ಪ್ರಶಸ್ತಿ

ಹೀಗೆ ಇನ್ನು ಅನೇಕ ಪ್ರಶಸ್ತಿಗಳು ಇವರಿಗೆ ಸಂದಿವೆ. ಜೊತೆಗೆ ಪತ್ರಿಕೆಗಳು ಶ್ರೀಯುತರ ಬಗ್ಗೆ ಲೇಖನಗಳನ್ನು ಪ್ರಕಟಿಸಿವೆ.

೩

# ಅರ್ಥಸೂಚಿ

ಅಂದಳ : ಪಲ್ಲಕ್ಕಿ

ಅಟ್ಟಮಡಿಕೆ : ಅಡಿ ಮಾಡುವ ಮಣ್ಣಿನ ಪಾತ್ರೆ

ಅಳವಡದು : ಯೋಗ್ಯವಾಗಿರದು

ಅನಿತ್ಯ : ಕ್ಷಣಿಕ

ಅಳಾಪ : ಸಂಭಾಷಣೆ

ಅಮೇಧ್ಯ : ಮಲ ಕಕ್ಕಸ

ಅಪ್ಪು : ನೀರು

ಅಂಗುಷ್ಠ : ಹೆಬ್ಬೆರಳಿನ ತುದಿ

ಅಶನ : ಆಹಾರ

ಅನಾದಿ : ಕೊನೆ (ಅಂತ್ಯ)

ಅಂಬಲ : ಗಂಜಿ

ಅಳಪದಿರು : ಹೆದರದಿರು

ಅಸ್ತಮಾನ : ಮುಳುಗು

ಅಂಗಜ : ಕಾಮನ

ಅರೆ : ಬಂಡೆ

ಅಂಕುಶ : ಆನೆಯನ್ನು ಪಳಗಿಸುವ ಅಸ್ತ್ರ

ಅನುಭಾವ : ಗುಣ, ಜ್ಞಾನ

ಅನಂತಕಾಲ : ಬಹಳ ದಿನ

ಅಜಾತ : ಹುಟ್ಟಿಲ್ಲದವ(ಶಿವ)

ಆನುಮಾಡ : ಸಂಭವಿಸು

ಆಪ್ಯಾಯನ : ಹೆಚ್ಚಳ(ತೃಪ್ತಿ)

ಉಪ್ಪರಿಗೆ : ಇಂಬು ಅರಮನೆ

ಉರದ : ಇರುವ

ಉದಕ : ನೀರು

ಉಡುಪತಿ : ಚಂದ್ರಧರ

ಓಗರ : ಅನ್ನ

ಕಪಟ : ಮೋಸ

ಕಬ್ಬಲಿಗ : ಬೇಡ

ಕನಕಗಿರಿ : ಬಂಗಾರದ ಬೆಟ್ಟ

ಕರೋಟಿಮಾಲೆ : ತಲೆಬುರುಡೆಯ ಹಾರ

ಕಮಲವೈರಿ : ಶಿವ

ಕಾಷ್ಠ : ಕಟ್ಟಿಗೆ

ಕಾಂತರವ : ದೊಡ್ಡ ಅಡವಿ

ಕಿಂಕಲ : ದೈನ್ಯ

ಕಿಂಕುರ್ವಾಣವ : ಸಂಕೀರ್ಣತೆ

ಕುನ್ನಿ : ನಾಯಿಮರಿ

ಕೂಟ : ಕೊಡುವಿಕೆ, ಯೋಗ

ಕೇಶವ : ಶಿವ

ಕೊತ್ತಿಗೆ : ಬೆಕ್ಕು

ಕೃಷ್ಣವರ್ಣ : ಕಪ್ಪುಬಣ್ಣ

ಖಟಿ : ಸಿಟ್ಟು

ಗದ್ಯಾಣ : ತೂಕ, ಒಂದು ಚಿನ್ನದ ನಾಣ್ಯ

ಗಾರ್ದಭ : ದಡ್ಡ(ಮಂಕ)

ಗುಹ್ಯ : ಗುಪ್ತಲಿಂಗ

ಗೋತ್ರ : ವಂಶ

ಚಕ್ಷು : ನೋಟ

ಚರಣ : ಪಾದ

ಚಿತ್ತ : ಗಮನ

ಚೈತನ್ಯ : ಜ್ಞಾನ(ಪರಮಾತ್ಮ)

ಜಂಘೆ : ಮೊಳಕಾಲು

ಜಾಲಗಾರ : ಮೋಸಗಾರ ಬೆಸ್ತ

ಜಾತಿಸಂಕರ : ಅಂತರ್ಜಾತಿ ಸಂಬಂಧದಿಂದ ಹುಟ್ಟಿದ ಮಗು

ಠಾವು : ಸ್ಥಳ

ತರುಗಳು : ಗಿಡ, ಮರ

ತಳೆ : ಭ್ರಾಂತಿ ಹುಟ್ಟು

ತಮಿಂದ : ಕತ್ತಲು(ಅಜ್ಞಾನ)

ತತ್ವ : ನಾರ

ತೊತ್ತಿಗ : ಸೇವಕ

ತುರಗ : ಕುದುರೆ

ತೇಜ : ಹೊಳಪು

ಧರಣೇಂದ್ರ : ಭೂಮಿಗೆ ಒಡೆಯ

ದೀಕ್ಷೆ : ಮಂತ್ರೋಪದೇಶ

ನಚ್ಚು : ನಂಬು

ನಾಭಿ : ರಾಜರಾಜೇಶ್ವ(ಬ್ರಹ್ಮ)

ನಾಸ್ತಿ : ಇಲ್ಲ, ಅಲ್ಲ

ನಿಷ್ಕಲ : ಅಖಂಡ, ಅವಿಭಕ್ತ

ನಿಚ್ಚ : ನಿತ್ಯ

ಪರಿತ್ಯಾಗ : ಬಿಡುಗಡೆ

ಪರ : ಸ್ವರ್ಗ

ಪಶುಪತಿ : ಶಿವ

ಪವನ : ಗಾಳಿ

ಪರಿಮಳ : ಸುವಾಸನೆ

ಪಾಣಿ : ಕೈ

ಪಾತಕ : ಕೆಟ್ಟ, ಕೆಲಸ, ಪಾಪ

ಪಾಷಾಣ : ಕಲ್ಲು

ಪಿತ್ತ : ಹಳದಿ

ಫಣಿಕುಂಡಲ : ಹಾವನ್ನು ಧರಿಸಿದವ

ಪ್ರಭೆ : ಹೊಳಪು, ಪ್ರಕಾಶ

ಭವಿ : ವೀರಶೈವ

ಭವರೋಗ : ಸಕಲರೋಗ

ಬಿಯಗೆ : ಖರ್ಚು ಮಾಡುವವ

ಬೆನವ : ಬೆನಕ

ಮರುಳೆ : ಬಾಲಕ

ಮಚ್ಚ : ಮೀನು

ಮಾಟ : ಕೆಲಸ

ಮಂಡೂಕ : ಕಪ್ಪೆ

ಮುಕುಟ : ಕಿರೀಟ, ಜುಟ್ಟು

ಮುಕ್ತ : ಬಿಡುಗಡೆ

ಮುಂಡಿಗೆ : ವಿಚಾರ

ಮೃಢ : ಶಿವ

ರಜತ : ಬೆಳ್ಳಿ

ಲೋಗರಿಗೆ : ಸಾಮಾನ್ಯನಿಗೆ

ಲೌಕಿಕರು : ಲೋಕ ಪ್ರಸಿದ್ಧರು

ವರುಷ : ಸ್ಪರ್ಶಮಣಿ

ವಿರಕ್ತ : ಸನ್ಯಾಸಿ

ಶೂದ್ರ : ಅಸ್ಪೃಶ್ಯ

ಷೋಡಶ : ಹದಿನಾರು

ಸಂಚರಾಚರ : ವಿಶ್ವ

ಸಟ್ಟುಕ : ಸೌಟು

ಸಾಸಿರ : ಸಾವಿರ

ಸೀತಳ : ತಂಪು

ಸುರಭಿ : ಆಕಳು

ಸುರಧೇನು : ಕಾಮಧೇನು

ಸೂಣಗ : ನಾಯಿ

ಸ್ಥಲ : ಸ್ಥಳ

ಸೋಮ : ಚಂದ್ರಲೋಕ

ಸೂಲ : ಶೂಲ

ಸದಾಚಾರ : ಒಳ್ಳೆಯ ನಡತೆ

ಸುರಮಡಿಕೆ : ಮದ್ಯ ತುಂಬಿದ ಗಡಿಗೆ

ಸೂತ : ಪಾಪ

ಸ್ತುತಿ : ಹೊಗಳು

ಸುಯಿದಾನ : ಗಮನ ಲಕ್ಷ್ಯ

ಸೊನೆಗಿರಿ : ವ್ಯಾಧೆ

ಹುಸಿ : ಸುಳ್ಳು

ಹೆಳಿಗೆಯ : ಹಾವು ಇಡುವ ಬುಟ್ಟಿ

ಹಾವು : ಮೆಕ್ಕೆ ಹಣ್ಣು ಕೆಹಿಡಿದ ಹಣ್ಣು

ಹೇಗ : ಹುಚ್ಚ

ಹಂಗು : ಋಣ

ಹಂದೆ : ಹೇಡಿ, ಅಂಜುಬುರುಕ

ಹಗೆ : ವೈರಿ

# ಆಕರಗ್ರಂಥಗಳು

೧. ಅಂಬಿಗರ ಚೌಡಯ್ಯನ ವಚನಗಳು, ಎಸ್.ವಿದ್ಯಾಶಂಕರ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೦

೨. ಆಯ್ದ ಗಾದೆಗಳು ಹಾಗೂ ಒಗಟುಗಳು, ವೀರಣ್ಣದಂಡೆ, ಕವಿಮಾರ್ಗ ಪ್ರಕಾಶನ, ಕಲಬುರ್ಗಿ, ೧೯೮೫

೩. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ.ಮುಗಳಿ, ಗೀತಾಬುಕ್ ಹೌಸ್, ಮೈಸೂರು, ೧೯೫೩

೪. ಕನ್ನಡ ಕನ್ನಡ ಶಬ್ದಕೋಶ, ಗುರುನಾಥ ಜೋಷಿ, ಸಂಕೇಶ್ವರ ಪ್ರಕಾಶನ, ಗದಗ, ೧೯೯೦

೫. ಕನ್ನಡ ಸಾಹಿತ್ಯಕೋಶ, ರಾಜಪ್ಪ ದಳವಾಯಿ, ರಾಘುವೇಂದ್ರ ಪ್ರಕಾಶನ, ಬೆಂಗಳೂರು, ೧೯೯೭

೬. ಕನ್ನಡ ರತ್ನಕೋಶ, ಟಿ.ವಿ.ವೆಂಕಟಾಚಲಶಾಸ್ತ್ರೀ, ಹೆಚ್.ಎಂ.ಶಂಕರನಾರಾಯಣರಾವ್, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೧೯೭೭

೭. ಕನ್ನಡ ಸಾಹಿತ್ಯ ಸಂಗಾತಿ, ಕೀರ್ತಿನಾಥ ಕುರ್ತಕೋಟಿ, ಮೆಮೋರಿಯಲ್ ಟ್ರಸ್ಟ್, ಧಾರವಾಡ, ೧೯೯೫

೮. ಕುಷ್ಟಗಿ ಕರಿಬಸವೇಶ್ವರ ವಚನಗಳು, ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೦

೯. ಚೆನ್ನಬಸವವಣ್ಣನವರ ವಚನಗಳು, ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೯

೧೦. ನೀಲಮ್ಮನ ವಚನಗಳು, ಎಸ್.ಶಿವಣ್ಣ, ಸಾ.ಶಿ.ಮರುಳಯ್ಯ, ಬಸವ ಸಮಿತಿ, ಬೆಂಗಳೂರು, ೧೯೯೩

೧೧. ಪ್ರಭುದೇವರ ಷಟ್‌ಸ್ಥಲ, ಜಂಗಮಸ್ಥಲ ನಿರ್ದೇಶ, ವೀರಣ್ಣ ರಾಜೂರ, ಆರ್.ಸಿ.ಹಿರೇಮಠ, ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೯

೧೨. ಬಸವಣ್ಣ, ವೀರಣ್ಣ ರಾಜೂರ, ಮುತ್ತಿನಹಾರ ಮಾಲಿಕೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭

೧೩. ಬಿಡುಮುತ್ತು, ಎಸ್.ಶಿವಣ್ಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೧೪. ಮಹಾಮಾರ್ಗ, ಸದಾನಂದಕನವಳ್ಳಿ, ವೀರಣ್ಣ ರಾಜೂರ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೮

೧೫. ವಚನ ಸಾಹಿತ್ಯ ಸಂಪುಟ ೫, ಎಂ.ಚಿದಾನಂದಮೂರ್ತಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

೧೬. ವಚನ ಸಂಕಲನ ಸಂಪುಟ ೩, ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೧

೧೭. ವಚನ ಸಂಕಲನ ಸಂಪುಟ ೪, ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೨

೧೮. ವಚನ ಧರ್ಮಸಾರ, ಎಂ.ಎರ್.ಶ್ರೀನಿವಾಸಮೂರ್ತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

೧೯. ವಚನ ಕಮ್ಮಟ, ಕೆ.ಮರುಳಸಿದ್ಧಪ್ಪ, ಕಿ.ರಂ.ನಾಗರಾಜ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೯

೨೦. ವಚನ ಸ್ವರವಚನ, ಶಿವನಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೧. ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠ ಹಸ್ತಪ್ರತಿಸೂಚಿ ಸಂಪುಟ ೧, ಎಸ್.ಶಿವಣ್ಣ, ಬೃಹನ್ಮಠ ಚಿತ್ರದುರ್ಗ, ೧೯೯೧

೨೨. ಸಿರಿಸಂಪದ, ಎಫ್.ಟಿ.ಹಳ್ಳಿಕೇರಿ, ಕೆ.ರವೀಂದ್ರನಾಥ, ಶಿರೂರು ಅಭಿನಂದನ ಸಮಿತಿ, ಯಲಬುರ್ಗಾ, ೨೦೦೨

೨೩. ಸಕಲ ಪುರಾತನರ ವಚನಗಳು, ಬಿ.ವಿ.ಶಿರೂರ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೬

೨೪. ಹೊಸವಚನಗಳು(ಅಪ್ರಕಟಿತ), ಎಸ್.ಶಿವಣ್ಣ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮